


# ಕನ್ನಡ ವಿಶ್ವವಿದ್ಯಾಲಯ - ಹಂಪಿ

ವಿದ್ಯಾರಣ್ಯ - 583276

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ

## "ಕನಕಪುರ ತಾಲ್ಲೂಕಿನ ದರ್ಗಾಗಳು - ಒಂದು ಅಧ್ಯಯನ"

ಸಂಶೋಧನಾ ವಿದ್ಯಾರ್ಥಿ

ಮಖ್ತರ್ ಪಾಷ. ಎಂ.ಎ

ನೋಂದಣಿ ಸಂಖ್ಯೆ : 142001030043

**ಮಾನ್ಯತಾ ಸಂಸ್ಥೆ:**

ಕನ್ನಡ ಸಾಹಿತ್ಯ ಪರಿಷತ್ತು

ಪಂಪ ಮಹಾಕವಿ ರಸ್ತೆ

ಚಾಮರಾಜಪೇಟೆ

ಬೆಂಗಳೂರು - 560018

**ಮಾರ್ಗದರ್ಶಕರು :**

ಡಾ.ವೆಂಕಟಪ್ಪ

ಕನ್ನಡ ಉಪನ್ಯಾಸಕರು

ಎಸ್.ಎಲ್.ಎನ್ ಕಾಲೇಜು, ಕೋಟೆ

ಬೆಂಗಳೂರು - 570002



**2015**






# ಕನ್ನಡ ವಿಶ್ವವಿದ್ಯಾಲಯ – ಹಂಪಿ

ವಿದ್ಯಾರಣ್ಯ – 583276

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ

## "ಕನಕಪುರ ತಾಲ್ಲೂಕಿನ ದರ್ಗಾಗಳು – ಒಂದು ಅಧ್ಯಯನ"

ಸಂಶೋಧನಾ ವಿದ್ಯಾರ್ಥಿ

ಮಖ್ತುರ್ ಪಾಷ. ಎಂ.ಎ

ನೋಂದಣಿ ಸಂಖ್ಯೆ : 142001030043

ಮಾನ್ಯತಾ ಸಂಸ್ಥೆ:

ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ
ಚಾಮರಾಜಪೇಟೆ
ಬೆಂಗಳೂರು – 560018



ಮಾರ್ಗದರ್ಶಕರು :

ಡಾ.ವೆಂಕಟಪ್ಪ
ಕನ್ನಡ ಉಪನ್ಯಾಸಕರು
ಎಸ್.ಎಲ್.ಎನ್ ಕಾಲೇಜು, ಕೋಟೆ
ಬೆಂಗಳೂರು – 570002

2015

## ಘೋಷಣಾ ಪತ್ರ

"ಕನಕಪುರ ತಾಲ್ಲೂಕಿನ ದರ್ಗಾಗಳು–ಒಂದು ಅಧ್ಯಯನ" ಎಂಬ ಸಂಶೋಧನಾ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ವೆಂಕಟಪ್ಪ, ಕನ್ನಡ ಉಪನ್ಯಾಸಕರು, ಕನ್ನಡ ವಿಭಾಗ, ಎಸ್.ಎಲ್.ಎನ್. ಕಾಲೇಜು, ಕೋಟೆ, ಬೆಂಗಳೂರು. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧದ ವಿಷಯವನ್ನು ಇದುವರೆವಿಗೂ ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : 27-08-2015

ಸಂಶೋಧನಾ ವಿದ್ಯಾರ್ಥಿ

(ಮಖ್ತರ್‌ಪಾಷ ಎಂ.ಪಿ)

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಮಖ್ತರ್‌ಪಾಷ ರವರು ಎಂ.ಫಿಲ್. ಪದವಿಗಾಗಿ ಬರೆದು ಸಿದ್ಧಪಡಿಸಿರುವ "ಕನಕಪುರ ತಾಲ್ಲೂಕಿನ ದರ್ಗಾಗಳು–ಒಂದು ಅಧ್ಯಯನ" ಎಂಬ ಸಂಶೋಧನಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಶೋಧನಾ ಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೂ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : [illegible]

ಮಾರ್ಗದರ್ಶಕರು

ಡಾ|| ವೆಂಕಟಪ್ಪ, ಎಂ.ಎ. ಪಿಎಚ್.ಡಿ.
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಎಸ್.ಎಲ್.ಎನ್. ಕಾಲೇಜು
ಕೋಟೆ, ಬೆಂಗಳೂರು–560 002

ಡಾ. ವೆಂಕಟಪ್ಪ,
ಕನ್ನಡ ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ,
ಎಸ್.ಎಲ್.ಎನ್. ಕಾಲೇಜು, ಕೋಟೆ,
ಬೆಂಗಳೂರು –57002.

# ಪರಿವಿಡಿ

**ಇಂದಿರಾ ನಗರ [ಸಂತೆಕೋಡಿಹಳ್ಳಿ]**

- ದೀದಾರ್ ಅಲಿ ಷಾ
- ಶ್ರೀಮತಿ ಲೇಟ್ ಜಮಾಲ್ ಮಸ್ತನೀಮಾ

**ಸಂತೆಕೋಡಿಹಳ್ಳಿ**

- ಹಜರತ್ ಮಖ್‌ಬೂಲ್ ಅಲಿ ಷಾಖಾದ್ರಿ
- ಹಜರತ್ ಹುಜೂರ್ ಅಲಿ ಷಾಖಾದ್ರಿ

**ಚಿಕ್ಕಬ್‌ಹಳ್ಳಿ [ಸಂತೆಕೋಡಿಹಳ್ಳಿ]**

- ಹಜರತ್ ಖ್ವಾಜಾ ರೆಹಮತ್ ಆಲಿ ಷಾಖಾದ್ರಿ

**ಹುಣಸನಹಳ್ಳಿ [ಪಟೇಲರ ದೊಡ್ಡಿ]**

- ಸೈಯ್ಯದ್ ಯುಸುಫ್ ಅಲಿ ಷಾಖಾದ್ರಿ

**ಹೂಕುಂದ**

- ಹಜರತ್ ಸಯ್ಯದ್ ಮಹಮ್ಮದ್ ಷಾಖಾದ್ರಿ
- ಹಜರತ್ ಸಯ್ಯದ್ ಯಖೀನ್ ಷಾಖಾದ್ರಿ

**ಮರಿಗೌಡನದೊಡ್ಡಿ**

- ಹಜರತ್ ಸಯ್ಯದ್ ರೋಷನ್ ಅಲಿ ಷಾಖಾದ್ರಿ

**ಸಾತನೂರು**

- ಹಜರತ್ ಸಯ್ಯದ್ ಖರೀಬುಲ್ಲಾ ಷಾಖಾದ್ರಿ

# ಅಧ್ಯಾಯ – 1

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಮಹತ್ವ ಮತ್ತು ಇದುವರೆಗಿನ ಅಧ್ಯಯನಗಳ ನೋಟ

ಕರ್ನಾಟಕದ ರಾಜಧಾನಿ ಬೆಂಗಳೂರಿನಿಂದ ದಕ್ಷಿಣಕ್ಕೆ ಕೇವಲ 56 ಕಿ.ಮೀ ದೂರದಲ್ಲಿ ಅರ್ಕಾವತಿ ಬಲದಂಡೆಯ ಮೇಲಿರುವ ಕನಕಪುರ ಹಿಂದೆ ಕಾನಕನಹಳ್ಳಿಯಾಗಿತ್ತು. ಈ ತಾಲ್ಲೂಕು ಬೆಟ್ಟಗುಡ್ಡಗಳಿಂದ ಕೂಡಿದೆ.ಇಂತಹ ಒಂದು ತಾಲ್ಲೂಕಿನಲ್ಲಿ ಮುಸ್ಲಿಂ ಜನಾಂಗವು ವಾಸವಾಗಿದ್ದು ದರ್ಗಾಗಳ ಮೂಲಕ ಉರುಸ್ ಆಚರಣೆಯನ್ನು ಆಚರಿಸುತ್ತಾರೆ.ದರ್ಗಾ ಎಂದರೆ ಸಮಾಧಿ, ವಲೀಯವರು ಐಕ್ಯರಾದ ಸ್ಥಳ, ಸ್ಮಶಾನ, ಭೂತ ಪ್ರೇತಗಳ ನಿರ್ವಹಣೆಯ ಸ್ಥಳ, ಸಮಸ್ಯೆಗಳನ್ನು ನಿವಾರಿಸುವ ಸ್ಥಳ, ಅನೇಕ ಪವಾಡಗಳು ನಡೆಯುವ ಐತಿಹ್ಯಗಳನ್ನು ಒಳಗೊಂಡಂತಹ ಸ್ಥಳ, ಭಾವೈಕ್ಯತೆಗೆ ಭಾಜನವಾದಂತಹ ಸ್ಥಳ, ಹಾಗೂ ಪ್ರೇಕ್ಷಣೀಯ ಪ್ರವಾಸಿ ತಾಣಗಳಾಗಿ ಮಾರ್ಪಟ್ಟು ಹರಕೆಗಳನ್ನು ತೀರಿಸುವಂತಹ ಸ್ಥಳ. ಹೀಗೆ ಅನೇಕ ಹೆಸರುಗಳಿಂದ ಪ್ರಖ್ಯಾತಿ ಪಡೆದಿರುವಂತಹ ಸಮಾಧಿಗಳೇ ದರ್ಗಾಗಳು ಎಂದು ಕರೆಯಲ್ಪಟ್ಟಿವೆ.

ಇಂತಹ ಹಲವು ದರ್ಗಾಗಳಲ್ಲಿ ಉತ್ಸವಗಳನ್ನು ಮತ್ತು ಹಬ್ಬಗಳನ್ನು ಆಚರಿಸುತ್ತಾರೆ.ಈ ಉತ್ಸವಗಳು ಮತ್ತು ಹಬ್ಬಗಳು ಮುಸ್ಲಿಂ ಮತ್ತು ಹಿಂದೂಗಳ ಸ್ನೇಹ ಪರವಾಗಿ ಆಚರಿಸಲ್ಪಟ್ಟಿವೆ. ಇಂತಹ ಆಚರಣೆಗಳಲ್ಲಿ ಮುಸ್ಲಿಂ ಸಮುದಾಯದವರು ದರ್ಗಾಗಳ ಭೇಟಿ ಮತ್ತು ಉರುಸ್ [ಉತ್ಸವ]ಗಳನ್ನು ಕರ್ನಾಟಕದಾದ್ಯಂತ ಆಚರಿಸುವುದು ಕಂಡು ಬರುತ್ತದೆ. ಇಂತಹ ಆಚರಣೆಗಳು ಹಿಂದೂ ಸಂಸ್ಕೃತಿಯೊಡನೆ ಬದುಕುತ್ತಿರುವ ಮುಸ್ಲಿಂಮರು ದರ್ಗಾಗಳ ಮೂಲಕ ತಮ್ಮದೇ ಆದ ಜನಪದ ಉತ್ಸವಗಳನ್ನು ಆಚರಿಸಿಕೊಂಡು ಬರುತ್ತಿರುವುದು ಕಂಡುಬರುತ್ತದೆ.ಇಂತಹ ಆಚರಣೆಗಳು ವಿಭಿನ್ನ ಭಾಷೆ ರೂಢಿ ಸಂಪ್ರದಾಯ ನಂಬಿಕೆಗಳನ್ನು ಹೊಂದಿರುವ ಸಮಾಜದಲ್ಲಿ ಐಕ್ಯತೆಯ ಮನೋಭಾವನೆಯಿಂದ 'ವಲೀ'ಗಳನ್ನು ನೆನೆಯುತ್ತಾ ಅವರ ಆರಾಧನೆಯಲ್ಲಿ ತೊಡಗಿಕೊಂಡಿದ್ದಾರೆ.ಇಂತಹ ಜನಪದ ಆಚರಣೆಯಲ್ಲಿ ಹಿಂದೂ–ಮುಸ್ಲಿಂ ಎಂಬ ಭೇದಭಾವವಿಲ್ಲದೆ ಏಕತೆಯ ಮನೋಭಾವನೆಯಿಂದ ವಲೀಗಳ ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಿದ್ದಾರೆ.ವಲೀ ಎಂದರೆ ಅಲ್ಲಾನ ಮಿತ್ರ ಎಂಬ ಅರ್ಥವಿದೆ. ವಲೀಗಳು ರಾಜಕೀಯವನ್ನು ತಿರಸ್ಕರಿಸಿ ಹಿಂದೂ ಮುಸ್ಲಿಂ ಎಂಬ ಭೇಧ ಭಾವನೆಗಳಿಲ್ಲದೆ ಜನ ಸಾಮಾನ್ಯರ ನಡುವೆ ಸಾಮಾನ್ಯ ವ್ಯಕ್ತಿಯಾಗಿ ಅಲ್ಲಾನ ಕೃಪೆಗೆ ಪಾತ್ರರಾಗಿ ಹಲವು ಶಕ್ತಿಗಳನ್ನು ಪರವಶ ಮಾಡಿಕೊಂಡು ಸಮಾಜದ ಒಳಿತಿಗಾಗಿ ಜಂಗಮರ ರೀತಿಯಲ್ಲಿ ಸೂಫಿಸಂತರಾಗಿ ಅಲ್ಲಾನ

ಆದರ್ಶದಂತೆ ಜನರ ಹತ್ತಿರ ಬಂದು ಅವರ ಸಂಕಷ್ಟಗಳನ್ನು ಪರಿಹರಿಸುವಲ್ಲಿ ಯಶಸ್ವಿಯಾಗುತ್ತಿದ್ದರು. ಇಂತಹ ಉತ್ತಮ ಸಂಬಂಧಇಟ್ಟು ಕೊಂಡಿದ್ದಂತಹ ವಲೀಗಳಿಗೆ ಅನೇಕ ಶಿಷ್ಯರುಗಳಾದರು.ಗುರುವಿಗೆ ಪೀರ್ ಎಂದರೆ ಶಿಷ್ಯರಿಗೆ ಮುರೀದ್ ಎಂದು ಕರೆಯುತ್ತಾರೆ.ಇಂತಹ ಗುರುಶಿಷ್ಯರನ್ನು 'ಪೀರ್ ಮುರೀದ್' ಪರಂಪರೆ ಎಂದು ಕರೆಯುತ್ತಾರೆ.

ಹೀಗೆ ಕನಕಪುರ ತಾಲ್ಲೂಕು ಸುಮಾರು 24 ದರ್ಗಾಗಳನ್ನು ಒಳಗೊಂಡಿದೆ.ಈ 24 ದರ್ಗಾಗಳಲ್ಲೂ ಕೂಡ ಉರುಸ್ ಆಚರಣೆ ನಡೆಯುತ್ತದೆ. ಪ್ರಮುಖ ದರ್ಗಾಗಳೆಂದರೆ ಕನಕಪುರದಲ್ಲಿ 5 ದರ್ಗಾಗಳಿವೆ. ತುಂಗಣಿಯಲ್ಲಿ ಒಂದು, ಆಡನಕುಪ್ಪೆಯಲ್ಲಿ ಒಂದು, ತಿಮ್ಮಸಂದ್ರದಲ್ಲಿ ಮೂರು, ಕೆರಳಾಳುಸಂದ್ರದಲ್ಲಿ ಒಂದು, ನಾರಾಯಣಪುರದಲ್ಲಿ ಮೂರು, ಸಾತನೂರಿನಲ್ಲಿ ಒಂದು, ಸಾಸಲಾಪುರದಲ್ಲಿ ಒಂದು, ಸಂತೆಕೋಡಿಹಳ್ಳಿಯಲ್ಲಿ ನಾಲ್ಕು, ಹೂಕುಂದದಲ್ಲಿ ಎರಡು, ಐನೋರಗೊಲ್ಲಹಳ್ಳಿಯಲ್ಲಿ ಒಂದು, ಹುಣಸಳ್ಳಿಯಲ್ಲಿ ಒಂದು , ಚಿಕ್ಕನಹಳ್ಳಿಯಲ್ಲಿ ಒಂದು, ಹೀಗೆ ತಾಲ್ಲೋಕಿನಾದ್ಯಂತ 24 ದರ್ಗಾಗಳು ಕಂಡುಬರುತ್ತವೆ. ಹೀಗೆ ಪ್ರತಿಯೊಂದು ದರ್ಗಾಗಳು ವಲೀಗಳ ಸಮಾಧಿಗಳಾಗಿವೆ. ಈ ವಲೀಗಳು ಬದುಕಿರುವಾಗ ಜನರ ಕಷ್ಟಗಳನ್ನು ನಿವಾರಿಸುತ್ತಿದ್ದರು ಹಾಗೂ ಅನೇಕ ಪವಾಡಗಳನ್ನು ಮಾಡುತ್ತಿದ್ದರೆಂದು ಐತಿಹ್ಯಗಳಿವೆ. ಇಂತಹ ಐತಿಹ್ಯಗಳನ್ನು ನಂಬಿದ ಜನ ಸಮುದಾಯ ದರ್ಗಾಗಳಿಗೆ ಭೇಟಿ ನೀಡುವುದು. ತಮ್ಮ ಕಷ್ಟಗಳನ್ನು ವಲೀಗಳಿಗೆ ಭಿನ್ನಯಿಸಿ ನಮ್ಮ ಕಷ್ಟಗಳನ್ನು ನಿವಾರಿಸು ಎಂದು ಪ್ರಾರ್ಥಿಸಿ ಅನೇಕ ಹರಕೆಗಳನ್ನು ಕಟ್ಟಿಕೊಳ್ಳುತ್ತಾರೆ. ಇಂತಹ ಹರಕೆಗಳು ಈಡೇರಿದಾಗ ಮತ್ತೆ ದರ್ಗಾಗಳ ಸನ್ನಿಧಿಗೆ ಭೇಟಿ ನೀಡಿ ಹರಕೆ ತೀರಿಸಿ ಆ ವಲೀಯ ಹೆಸರಿನಲ್ಲಿ ಸಿಹಿ ತಿಂಡಿಗಳನ್ನು ಅಥವಾ ಮಾಂಸಾಹಾರದ ಊಟವನ್ನು ದರ್ಗಾದ ಹತ್ತಿರವೇ ತಯಾರಿಸಿ ದರ್ಗಾದಲ್ಲಿರುವ ಮುಜಾವರ್ [ಪೂಜಾರಿ] ರವರ ಮೂಲಕ ತಯಾರಿಸಿದ ಭಕ್ಷಗಳನ್ನು ಇಟ್ಟು ಫಾತೇಹ ಓದಿಸಿ ಅಲ್ಲಿ ಬರುವಂತಹ ಭಕ್ತಾದಿಗಳಿಗೆ ಹಾಗೂ ದೀನದಲಿತರಿಗೆ ಊಟವನ್ನು ಬಡಿಸಿ ಆ ವಲೀಯ ಕೃಪೆಗೆ ಪಾತ್ರರಾಗುತ್ತಾರೆ

ಹೀಗೆ ಅನೇಕ ರೀತಿಯ ನಂಬಿಕೆ, ಆದರ್ಶ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪ, ಐತಿಹ್ಯಗಳು, ಪವಾಡಗಳು ನಡೆಯುತ್ತಿರುವಂತಹ ದರ್ಗಾಗಳ ಅಧ್ಯಯನದ ಮೂಲಕ ದರ್ಗಾಗಳ ಹಿನ್ನೆಲೆ, ಮಹತ್ವ ಸ್ವರೂಪವನ್ನು ಅಧ್ಯಯನ ಮಾಡುವುದರ ಮೂಲಕ ಮುಂದಿನ ಪೀಳಿಗೆಗೆ ಮತ್ತು ಇಂದಿನ ದರ್ಗಾಗಳ ವಾಸ್ತವಗಳನ್ನು ಅರಿಯುವುದು. ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಹೀಗೆ ನಾಲ್ಕು ಅಧ್ಯಾಯಗಳು ಹಾಗೂ ಉಪಸಂಹಾರದಲ್ಲಿ ನಾಲ್ಕು ಅನುಬಂಧಗಳನ್ನು ಒಳಗೊಂಡ ಸಂಶೋಧನೆಯಾಗಿದೆ. ಈ ಅಧ್ಯಯನದ ಉದ್ದೇಶವು ಕನಕಪುರ ತಾಲ್ಲೋಕಿನ ಮುಸ್ಲಿಂ ಸಮುದಾಯ ಮತ್ತು ಇತರೆ ಸಮುದಾಯದವರು ಆಚರಿಸುವಂತಹ ಉರುಸ್ ಮತ್ತು ದರ್ಗಾಗಳನ್ನು ಅರಿಯುವುದರ ಮೂಲಕ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಆದ್ದರಿಂದ ಈ ಅಧ್ಯಯನ ಜಾನಪದೀಯ ಅಧ್ಯಯನವಾಗಿದೆ.

**ಅಧ್ಯಯನದ ಉದ್ದೇಶ**

ಕನಕಪುರ ತಾಲ್ಲೂಕು ಕಾನಕನಹಳ್ಳಿ ಎಂಬ ಹೆಸರಿನಿಂದ ಕನಕಪುರವಾಗಿ ಬೆಳೆದು ಬಂದು ಒಂದು ತಾಲ್ಲೋಕಾಗಿ ನಿರ್ಮಾಣ ಗೊಂಡಿರುವುದು. ಇಂತಹ ತಾಲ್ಲೂಕಿನಲ್ಲಿ ದರ್ಗಾಗಳಲ್ಲಿ ನಡೆಯುವ ಉರುಸ್ ಸಂಪ್ರದಾಯದ ಆಚರಣೆಯಲ್ಲಿ 'ಖವಾಲಿ' ಏರ್ಪಡಿಸಿ ರಾತ್ರಿ ಪೂರ್ಣ 'ವಲೀ'ಗಳ ನಾಮಪದ ಹಾಡುಗಳು ಹಾಡಿ ನೆನೆಯುವುದು. ಹಾಗೂ ಅಲ್ಲಾನ ಕೃಪೆಗೆ ಪಾತ್ರವಾಗುವುದು. ಈ ಸಂದರ್ಭಲ್ಲಿ ಗಜಲ್, ಶಾಯಿರಿ, ಕಹಾನಿಗಳನ್ನು ಕೂಡ ಖವಾಲಿಯಲ್ಲಿ ತಿಳಿಯಲಾಗುತ್ತದೆ.ಹೀಗೆ ಈ ಸಂಪ್ರದಾಯವು ಮೌಖಿಕ ಪರಂಪರೆಯಲ್ಲಿ ಬೆಳೆದು ಬಂದಿದ್ದು, ಇಂತಹ ಪರಂಪರೆಯನ್ನು ದರ್ಗಾಗಳ ಮೂಲಕ ಆಚರಿಸಿಕೊಂಡು ಮೌಖಿಕ ಪರಂಪರೆಯ ಜೀವಂತಿಕೆಯನ್ನು ಕಾಣಬಹುದಾದ ಅಧ್ಯಯನ ಮಾಡಲಾಗಿದೆ.

ಇಂತಹ ದರ್ಗಾಗಳ ಆಚರಣೆಗಳನ್ನು ಅರಿಯುವುದೇ ಸವಾಲಾಗಿದೆ.ಏಕೆಂದರೆ ಮುಸ್ಲಿಂ ಸಮುದಾಯದಲ್ಲಿ ಪ್ರಮುಖವಾಗಿ ಎರಡು ಗುಂಪುಗಳನ್ನು ಕಾಣಬಹುದು.ಈ ಎರಡು ಗುಂಪುಗಳಲ್ಲಿ ಹಲವು ಭಿನ್ನಾಭಿಪ್ರಾಯಗಳು ಒಳಗೊಂಡಿವೆ. ಆ ಎರಡು ಗುಂಪುಗಳೆಂದರೆ ಒಂದು ಜಮಾತ್ ಇನ್ನೊಂದು ಮುರ್ಷದ್ ಪಂಗಡ [ವಲೀಗಳು] ಗಳ ನಡುವೆ ಅನೇಕ ಸಂಘರ್ಷಗಳು ಕಂಡುಬರುತ್ತವೆ. ಅವುಗಳನ್ನು ನನ್ನ ಅಧ್ಯಯನದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಈ ಅಧ್ಯಯನದ ವ್ಯಾಪ್ತಿಯು ಕನಕಪುರ ತಾಲ್ಲೂಕನ್ನು ಒಳಗೊಂಡಿದೆ. ಈ ತಾಲ್ಲೂಕು ರಾಮನಗರ ಜಿಲ್ಲೆಯ ನಾಲ್ಕು ತಾಲ್ಲೋಕುಗಳಲ್ಲಿ ಅತಿ ಹಿಂದುಳಿದ ತಾಲ್ಲೂಕು ಇದಾಗಿದೆ. ಇಡೀ ಕರ್ನಾಟಕ ರಾಜ್ಯದಲ್ಲಿ ಉಳಿದ ತಾಲ್ಲೋಕುಗಳಿಗೆ ಹೋಲಿಸಿಕೊಂಡರೆ ಅತ್ಯಂತ ಹಿಂದುಳಿದ ತಾಲ್ಲೂಕಾಗಿದೆ. ಈ ತಾಲ್ಲೂಕಿನಲ್ಲಿ 239 ಹಳ್ಳಿಗಳಿದ್ದು 43 ಗ್ರಾಮ ಪಂಚಾಯಿತಿಗಳು 6

ಹೋಬಳಿಗಳು ಒಂದು ನಗರ ಸಭೆಯನ್ನು ಒಳಗೊಂಡಿದೆ. ಇದರಲ್ಲಿ 219 ಹಳ್ಳಿಗಳಿದ್ದು ಜನರು ವಾಸವಾಗಿದ್ದಾರೆ. ಉಳಿದ 20 ಹಳ್ಳಿಗಳಲ್ಲಿ ಜನರು ವಾಸವಾಗಿಲ್ಲ. ಈ ತಾಲ್ಲೂಕಿನಲ್ಲಿ ವಾಸವಾಗಿರುವಂತಹ ಮುಸ್ಲಿಂ ಮತ್ತು ಹಿಂದುಗಳು ಒಗ್ಗೂಡಿ ದರ್ಗಾಗಳ ಭೇಟಿ ಮತ್ತು ಉರುಸ್ ಆಚರಿಸಿಕೊಂಡು ಬರುತ್ತಿರುವುದರ ಅಧ್ಯಯನ ನಡೆಸಲಾಗಿದೆ.

ಅಧ್ಯಯನದ ವ್ಯಾಪ್ತಿಯನ್ನು ಅನುಕೂಲಕ್ಕೆ ತಕ್ಕಂತೆ ವಿಂಗಡಿಸಿಕೊಳ್ಳಲಾಗಿದೆ. ಅಧ್ಯಯನದ ಮೊದಲ ಅಧ್ಯಾಯವು ಸಮುದಾಯಕ್ಕೆ ಸಂಬಂಧಿಸಿದ ಚರ್ಚೆ ಮತ್ತು ಅಧ್ಯಯನ ಉದ್ದೇಶ ಪರಿಚಯಿಸುವುದು.

ಎರಡನೇ ಅಧ್ಯಾಯದಲ್ಲಿ ಕನಕಪುರ ತಾಲ್ಲೋಕಿನ ಭೂ ಪ್ರದೇಶ ವ್ಯಾಪ್ತಿಯಲ್ಲಿರುವ ಭೌಗೋಳಿಕ ಅಂಶಗಳನ್ನು ವಿವರವಾಗಿ ನೀಡುವುದು. ಜೊತೆಗೆ ಮಣ್ಣಿನ ಗುಣಲಕ್ಷಣಗಳು ಮಳೆ, ಬೆಳೆ, ನೀರಾವರಿ, ಕೃಷಿ ಕೈಗಾರಿಕೆ, ಸಾರಿಗೆ, ಸಂಪರ್ಕ ಈ ತಾಲ್ಲೋಕಿನ ನೈಸರ್ಗಿಕ ಸಂಪನ್ಮೂಲಗಳು, ಹವಾಮಾನ, ತಾಲ್ಲೋಕಿನ ಪೌರಾಣಿಕ ಹಿನ್ನೆಲೆ, ಚಾರಿತ್ರಿಕ ಹಿನ್ನೆಲೆ, ಹಾಗೂ ತಾಲ್ಲೋಕಿನ ಆಳ್ವಿಕೆ ನಡೆಸಿದ ರಾಜರುಗಳ ಸಂಕ್ಷಿಪ್ತವಾದ ವಿವರಗಳನ್ನು ನೀಡುವುದು.

ಮೂರನೇ ಅಧ್ಯಾಯದಲ್ಲಿ ಮುಸ್ಲಿಂ ಸಮುದಾಯ ಜಾನಪದಿಯ ಹಿನ್ನೆಲೆಯಲ್ಲಿ ತಲೆಮಾರಿನಿಂದ ತಲೆಮಾರಿಗೆ ರೂಢಿಸಿಕೊಂಡು ಬಂದಿರುವಂತಹ ವಲೀಗಳ ಮೇಲಿನ ನಂಬಿಕೆ ಮತ್ತು ಆಚರಣೆಗಳು ಹಾಗೂ ದರ್ಗಾಗಳ ಉದ್ದೇಶ ದರ್ಗಾಗಳ ವಿನ್ಯಾಸ ಮತ್ತು ವಲೀಗಳ ಪವಾಡ, ಐತಿಹ್ಯಗಳು, ಜನಪ್ರಿಯತೆಗಳನ್ನು ಒಳಗೊಂಡಂತೆ ತಾಲ್ಲೂಕಿನ ಪ್ರತಿಯೊಂದು ದರ್ಗಾಗಳ ವಿಳಾಸ, ವಲೀಗಳ ಹೆಸರು ಉರುಸಿನ ದಿನಾಂಕಗಳನ್ನು ಒಳಗೊಂಡಂತಹ ಅನೇಕ ವೈಶಿಷ್ಟ್ಯಗಳನ್ನು ದರ್ಗಾದ ಮಹತ್ವವನ್ನು ಕ್ಷೇತ್ರ ಕಾರ್ಯಗಳ ಮೂಲಕ ವಕ್ತೃಗಳ ಅಭಿಪ್ರಾಯಗಳನ್ನು ಹಾಗೂ ದರ್ಗಾದಲ್ಲಿ ಫಾತೇಹ ಓದಿಸುವಂತಹ ಮುಜಾವರ್ ರವರ ಅಭಿಪ್ರಾಯಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅಧ್ಯಾಯ 4ರಲ್ಲಿ ದರ್ಗಾಗಳು ಬೇರೆ ಬೇರೆ ಸಮುದಾಯಗಳೊಂದಿಗೆ ಹೇಗೆ ಸ್ನೇಹಪರವಾದ ಸಂಬಂಧವನ್ನು ಉಳಿಸಿಕೊಂಡು ಬಂದಿವೆ ಎಂಬುವುದನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ..

**ಅಧ್ಯಯನದ ವಿಧಾನ**

ಈ ಸಂಶೋಧನೆಗೆ ಮುಖ್ಯ ಆಕರಗಳಾಗಿ ಕ್ಷೇತ್ರ ಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಗಳು ಮತ್ತು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ವಕ್ತೃಗಳು ಹೇಳುವ ಮಾಹಿತಿಗಳನ್ನು

ಬಳಸಿಕೊಳ್ಳಲಾಗಿದೆ. ಜೊತೆಗೆಈ ದರ್ಗಾ, ಉರುಸ್‌ಗಳ ಬಗ್ಗೆ ನಡೆದಿರುವ ಸಂಶೋಧನೆಗಳನ್ನು ಪ್ರಾಸಂಗಿಕವಾಗಿ ಬಳಸಿಕೊಳ್ಳಲಾಗಿದೆ. ಕನಕಪುರ ತಾಲ್ಲೂಕಿಗೆ ಸಂಬಂಧಿಸಿದ ಸಂಶೋಧನೆಗಳು, ಪುಸ್ತಕಗಳು, ಲೇಖನಗಳು, ಬಿಡಿಬರಹಗಳನ್ನು ಬಳಸಿಕೊಳ್ಳಲಾಗಿದೆ. ಹಾಗೂ ಈ ಸಂಶೋಧನೆಯು ಜಾನಪದೀಯ ಆಚರಣೆಯ ನೆಲೆಯಲ್ಲಿ ಅರಿಯುವುದಾಗಿದೆ. ಹೀಗೆ ಜಾನಪದದ ಹಿನ್ನೆಲೆಯಲ್ಲಿ ಈ ಆಚರಣೆಯನ್ನು ಸಂಗ್ರಹಿಸುವುದರಿಂದ ಈ ಅಧ್ಯಯನ ಜಾನಪದೀಯ ಅಧ್ಯಯನವಾಗಿದೆ.

**ಇದುವರೆಗಿನ ಅಧ್ಯಯನಗಳ ನೋಟ**

ಕನ್ನಡ ಸಾಹಿತ್ಯದಲ್ಲಿ ಇಂತಹ ಅಧ್ಯಯನ ಹೊಸದೇನಲ್ಲ. ಮೊಟ್ಟ ಮೊದಲಿಗೆ ಜನಪದದ ಮತ್ತು ಇಂತಹ ಆಚರಣೆಯ ಬಗ್ಗೆ ಸಂಶೋಧನೆಯನ್ನು ಬ್ರಿಟೀಷ್ ಅಧಿಕಾರಿಗಳು ಸ್ಥಳೀಯ ರಾಜಕೀಯವನ್ನು ಅರಿಯಲು ಮತ್ತು ಬ್ರಿಟೀಷ್ ಆಡಳಿತವನ್ನು ಮುಂದುವರಿಸಲು ಹಾಗೂ ಇಲ್ಲಿನ ಸಂಸ್ಕೃತಿಯನ್ನು ತಿಳಿಯಲು ಬ್ರಿಟೀಷ್ ಅಧಿಕಾರಿಗಳು ಇಂತಹ ಅಧ್ಯಯನಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಇದಕ್ಕೆ ಉತ್ತರವಾಗಿ 1857ರ ಸಿಪಾಯಿ ದಂಗೆಯನ್ನು ಗಮನಿಸಿದಾಗ ಆ ದಂಗೆಗೆ ಕಾರಣ ತಿಳಿಯದ್ದು ದಂಗೆ ಉಂಟಾಗಲು ಕಾರಣವಾಗಿದೆ. ಇಂತಹ ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಬ್ರಿಟೀಷ್‌ರು ಮೊದಲ ಬಾರಿಗೆ ಇಂತಹ ಸಂಶೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಹೀಗೆ ಬ್ರಿಟೀಷ್‌ರ ಮೂಲಕ ಸಂಶೋಧನೆಗಳು ಪ್ರಾರಂಭವಾಗಿ ಮುಸ್ಲಿಂಮರ ಆಚಾರ-ವಿಚಾರ ನಂಬಿಕೆ ಮತ್ತು ಹಬ್ಬಗಳಿಗೆ ಸಂಬಂಧಿಸಿದಂತೆ ಹಲವು ಪುಸ್ತಕಗಳನ್ನು ಬರೆಯಲಾಯಿತು.1987ರಲ್ಲಿ ಮರಾಠಿ ಲೇಖಕರಾದ ಡಾ॥ ಸೇತುಮಾಧವರಾವ್ ಪಗಡಿ ಅವರು ಭಾರತೀಯ ಮುಸಲ್ಮಾನ ಶೋಧ ಹಾಗೂ ಭೋಧ ಎಂಬ ಪುಸ್ತಕವನ್ನು ಆದ್ಯರಾಮಚಾರ್ಯರು ಕನ್ನಡಕ್ಕೆ ಅನುವಾದ ಮಾಡುವ ಮೂಲಕ ಮುಸ್ಲಿಂಮರ ಮೂಲದ ಬಗ್ಗೆ ವಿಶ್ಲೇಷಿಸಿದ್ದಾರೆ. 1989ರಲ್ಲಿ ಕನ್ನಡದಲ್ಲಿ ಮೊಹರಂ ಪದಗಳು ಮತ್ತು ಆಚರಣೆ ಒಂದು ಅಧ್ಯಯನ ಎಂದು ದಸ್ತಾಗೀರ್, ಅಲಿಬಾ, 2000ರಲ್ಲಿ ಕರ್ನಾಟಕದ ಉರುಸ್‌ಗಳು ಮುಲ್ಲಾ ಇಬ್ರಾಹಿಂ, 2003ರಲ್ಲಿ ಕನ್ನಡದಲ್ಲಿ ಮುಸ್ಲಿಂ ಲೇಖಕರ ಕಥಾ ಸಾಹಿತ್ಯ ಒಂದು ಅಧ್ಯಯನ-ಕಳಾರಲ್ಲಾವರ ಎಸ್. ಐ. 2005ರಲ್ಲಿ ಶಿಯಾ ಜನಾಂಗದ ಒಂದು ಸಾಂಸ್ಕೃತಿಕ ಅಧ್ಯಯನ-ಸಂಗೀತಾ.ಎಂ, 2006ರಲ್ಲಿ ಮುಸ್ಲಿಂ ಜನಾಂಗದ ಒಂದು ಅಧ್ಯಯನ - ಇಸ್ಮತುನ್ನಿಸಾ 2010ರಲ್ಲಿ ಆಧುನಿಕ ಕನ್ನಡ ಸಾಹಿತ್ಯಾ ಸಂದರ್ಭ - ಮುಸ್ಲಿಂ ಮಹಿಳಾ ಸಂವೇದನೆ - ಕೆ ಷರೀಫ್ - ಡಿಲಿಟ್ ಪದವಿಗಾಗಿ 2011ರಲ್ಲಿ

ರಾಮನಗರ ಜಿಲ್ಲೆಯ ಸ್ಥಳ – ನಾಮಗಳ ಅಧ್ಯಯನ ವಿಶ್ವನಾಥ ಮಳಗಿ ಕರ್ನಾಟಕ ಮುಸ್ಲಿಂ ಜಾನಪದ ಡಾ॥ ಷಹಸೀನಾ ಬೇಗಂ, ಕರ್ನಾಟಕದ ಸೂಫಿಗಳು, ರಹಮತ್ ತರೀಕೆರೆ.

ಹೀಗೆ ಈ ಮುಸ್ಲಿಂ ಸಮುದಾಯಕ್ಕೆ ಸಂಬಂಧಿಸಿದ ಅಧ್ಯಯನಗಳು ನಡೆದಿವೆಯಾದರು ಕನಕಪುರ ತಾಲ್ಲೋಕಿನ ದರ್ಗಾಗಳ ಬಗ್ಗೆ ಸಂಶೋಧನೆ ನಡೆದಿಲ್ಲ. ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಬರಹಗಾರರು ಮತ್ತು ಬರಹಗಾರ್ತಿಯರುಗಳಾದ ರಂಜಾನ್ ದರ್ಗಾ, ಬೊಳುವಾರು ಮಹಮ್ಮದ್ ಕುಂಞ, ನಿಸಾರ್ ಅಹಮದ್, ರಹಮತ್ ತರೀಕೆರೆ, ಫಕೀರ್ ಮಹಮದ್, ಕಟ್ಪಾಡಿಯಾ, ಸಾರಾ ಅಬೂಬಕರ್. ಕಬೀರ್ ಷರೀಫ್ ಭಾನುಮುಸ್ತಾಕ್, ಸಬೀಹ ಭೂಮಿಗೌಡ ರವರು ಮುಸ್ಲಿಂ ಸಮುದಾಯದ ಒಳ ನೋಟಗಳನ್ನು ಧರ್ಮದ ಕಟ್ಟು ಪಾಡುಗಳನ್ನು ಹಾಗು ತಮ್ಮದೇ ಆದ ಅನುಭವಗಳ ಮೂಲಕ ಕಟ್ಟಿಕೊಟ್ಟು, ಕನ್ನಡ ಸಾಹಿತ್ಯಕ್ಕೆ ಅಪಾರ ಕೊಡುಗೆಯನ್ನು ನೀಡಿದ್ದಾರೆ.ಆದರೆ ಕನಕಪುರ ತಾಲ್ಲೂಕಿನ ಮುಸ್ಲಿಂ ಸಮುದಾಯದಲ್ಲಿ ಕಂಡು ಬರುವಂತಹ ದರ್ಗಾಗಳ ಬಗ್ಗೆ ಈ ಅಧ್ಯಯನವು ಮಹತ್ವವನ್ನು ಪಡೆಯುತ್ತದೆ.

ಕನಕಪುರ ತಾಲ್ಲೋಕಿನ ಮುಸ್ಲಿಂ ಆಚರಣೆಗಳ ಬಗ್ಗೆ ಪ್ರತ್ಯೇಕವಾದ ಅಧ್ಯಯನಗಳು ನಡೆದಿಲ್ಲ. ಎ.ಸಿ.ಪಾರ್ಥರವರು "ರಾಮನಗರ ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಸಂಶೋಧನೆಯನ್ನು ಮಾಡಿದ್ದು ಆ ಸಂಶೋಧನೆಯಲ್ಲಿ ಮುಸ್ಲಿಂ ಸಮುದಾಯದ ಹಬ್ಬ ಮತ್ತು ಆಚರಣೆಗಳ ಬಗ್ಗೆ ದಾಖಲು ಮಾಡಿದ್ದಾರೆ. ಇದಲ್ಲದೇ ಕನಕಪುರ ತಾಲ್ಲೋಕಿನ ಬಗ್ಗೆ ಬಂದಿರುವ ವಿವಿಧ ದಿನ ಪತ್ರಿಕೆಗಳು ಮತ್ತು ನಿಯತಕಾಲಿಕಗಳಲ್ಲಿ ಪ್ರಕಟವಾದ ಲೇಖನಗಳನ್ನು ಕಾಣಬಹುದು.

**ಅಧ್ಯಯನದ ಮಹತ್ವ**

ಕನಕಪುರ ತಾಲ್ಲೋಕಿನ ಮುಸ್ಲಿಂ ಸಮುದಾಯ ಆಧುನಿಕತೆಯ ಪ್ರಭಾವ ಮತ್ತು ಇಸ್ಲಾಂ ಮೂಲಭೂತವಾದಿಗಳಿಂದ ಅನೇಕ ಆಚರಣೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ.ತಾಲ್ಲೋಕಿನ ಹಳ್ಳಿಗಳಲ್ಲಿ ತಮ್ಮ ಪೂರ್ವಜರು ಮಾಡಿಕೊಂಡು ಬಂದಿರುವ ಆಚರಣೆ ನಂಬಿಕೆಗಳನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.ಕ್ರಮೇಣ ಈ ಆಚರಣೆಗಳು ರೂಪಾಂತರ ಪಡೆಯುವ ಮೂಲಕ ತನ್ನ ಸತ್ವವನ್ನು ಕಳೆದುಕೊಳ್ಳುತ್ತಿವೆ. ದರ್ಗಾಗಳ ಬಗ್ಗೆ ವಿಚಾರಿಸಿದಾಗ ನಮ್ಮ ಹಿರಿಯರು ಬರುತ್ತಿದ್ದರು.ನಮ್ಮ ಹಿರಿಯರು ಆಚರಿಸುತ್ತಿದ್ದರು.ನಮ್ಮ ಹಿರಿಯರು ಈ ಸಂದರ್ಭದಲ್ಲಿ ಇಲ್ಲಿಗೆ ಭೇಟಿ ನೀಡುತ್ತಿದ್ದರು.ಆದ ಕಾರಣ ನಾವು ದರ್ಗಾಕ್ಕೆ ಭೇಟಿ ನೀಡಿ ಉರುಸ್‌ನಲ್ಲಿ ಪಾಲ್ಗೊಳ್ಳುತ್ತೇವೆ ಎಂದು ತಿಳಿಸುತ್ತಾರೆ.ಆದ ಕಾರಣ ದರ್ಗಾಗಳ ಬಗ್ಗೆ ಆಳವಾದ ಅಧ್ಯಯನ ನಡೆಸಿ ಅದರ ಸತ್ಯ–ಅಸತ್ಯಗಳ ಮೂಲ ತಿಳಿಯುವ ಅಧ್ಯಯನವಾಗಿರುವುದರಿಂದ ಕನಕಪುರ ತಾಲ್ಲೋಕಿನ ದರ್ಗಾಗಳ ಒಂದು ಅಧ್ಯಯನ ಮಹತ್ವವನ್ನು ಪಡೆದುಕೊಂಡಿದೆ.

# ಅಧ್ಯಯನ – 2

# ಕನಕಪುರ ತಾಲ್ಲೂಕಿನ ಭೌಗೋಳಿಕ ಹಿನ್ನೆಲೆ

ಕನಕಪುರ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಒಳಪಟ್ಟಿದ್ದು.23–08–2007ರಲ್ಲಿ ಆಡಳಿತಾತ್ಮಕ ಅನುಕೂಲಕ್ಕಾಗಿ ಮಾಗಡಿ, ಚನ್ನಪಟ್ಟಣ, ಕನಕಪುರ ತಾಲ್ಲೂಕುಗಳನ್ನು ಒಳಗೊಂಡ ರಾಮನಗರವನ್ನು ಜಿಲ್ಲೆಯನ್ನಾಗಿ ಘೋಷಿಸಲಾಯಿತು.

ಕನಕಪುರ ಸಾಂಸ್ಕೃತಿಕವಾಗಿ, ನೈಸರ್ಗಿಕವಾಗಿ, ಭಾಷಿಕವಾಗಿ ಹಲವು ವ್ಯತ್ಯಾಸಗಳು ತಾಲ್ಲೂಕಿನಲ್ಲಿ ಕಂಡು ಬರುತ್ತವೆ. ಈ ತಾಲ್ಲೂಕು ಅಪಾರವಾದ ರೇಷ್ಮೆ, ಬಾಳೆ, ಮಾವು ಹಾಗೂ ಇನ್ನಿತರ ಬೆಳೆಗಳನ್ನು ಬೆಳೆಯುವ ಪ್ರದೇಶವಾಗಿದೆ. ಅಪಾರವಾದ ನೈಸರ್ಗಿಕ ಸಂಪನ್ಮೂಲಗಳನ್ನು ಬೆಟ್ಟ ಗುಡ್ಡಗಳನ್ನು, ನದಿಗಳನ್ನು ಐತಿಹಾಸಿಕ ದೇವಾಲಯಗಳು, ಮಸೀದಿ, ದರ್ಗಾ, ಚರ್ಚ್‌ಗಳನ್ನು ಒಳಗೊಂಡಿದೆ. ಕನಕಪುರ ತಾಲ್ಲೂಕಿನಲ್ಲಿ ಹಳ್ಳಿ, ಗ್ರಾಮ, ಪಟ್ಟಣ, ಮತ್ತು ನಗರ ಪ್ರದೇಶವಾಗಿ ಬೆಳೆದು, ಪುರಸಭೆಯಾಗಿದ್ದ ಕನಕಪುರವನ್ನು 2015ರಲ್ಲಿ ನಗರ ಸಭೆಯನ್ನಾಗಿ ಘೋಷಿಸಲಾಗಿದೆ.

ಈ ತಾಲ್ಲೂಕು ಆಧುನಿಕತೆಗೆ ತೆರೆದುಕೊಂಡಿದ್ದರು ಸಹ ಈ ತಾಲ್ಲೂಕಿನಾದ್ಯಂತ ಹಲವು ಸಮುದಾಯದವರು ವಾಸವಾಗಿದ್ದಾರೆ. ಕಾಡಿನಲ್ಲಿಯೇ ವಾಸಿಸುತ್ತಿರುವ ಕಾಡುಕುರುಬರು, ಜೇನುಕುರುಬರು, ಲಂಬಾಣಿಗಳು, ಹಕ್ಕಿ–ಪಿಕ್ಕಿಯವರು ಆಧುನಿಕತೆಗೆ ತೆರೆದುಕೊಳ್ಳದೆ ಸಂಪ್ರದಾಯದ ನಂಬಿಕೆಗಳಿಗೆ ಒಳಗಾಗಿ ಸಾಂಪ್ರದಾಯಿಕ ಬದುಕನ್ನು ನಡೆಸುವ ಸಮುದಾಯ ಕಂಡು ಬರುತ್ತದೆ. ತಾಲ್ಲೂಕಿನಲ್ಲಿ ಹಲವಾರು ಸಮುದಾಯದವರು ವಾಸವಾಗಿರುವುದರಿಂದ ಕಲೆ, ಸಂಸ್ಕೃತಿ, ನಂಬಿಕೆ, ಆಚಾರ, ವಿಚಾರ, ವಿಭಿನ್ನ ಉಡುಗೆ–ತೊಡುಗೆ ಆಹಾರ ಪದ್ಧತಿಗಳೊಂದಿಗೆ ವಿವಿಧ ಭಾಷಿಕರುಗಳನ್ನು ಒಳಗೊಂಡಿದೆ.

**ಕನಕಪುರ ತಾಲ್ಲೂಕಿನ ಐತಿಹಾಸಿಕ ಹಿನ್ನೆಲೆ**

ಕರ್ನಾಟಕ ರಾಜಧಾನಿಯಾದ ಬೆಂಗಳೂರಿನಿಂದ ದಕ್ಷಿಣಕ್ಕೆ 56ಕಿ.ಮೀ ಅಂತರದಲ್ಲಿರುವ ಅರ್ಕಾವತಿ ನದಿಯ ದಂಡೆಯ ಮೇಲಿರುವ ಕನಕಪುರ ಹಿಂದೆ ಕಾನಕಾನಹಳ್ಳಿಯಾಗಿತ್ತು. ಇಂದು 239 ಹಳ್ಳಿಗಳು, 43 ಗ್ರಾಮ ಪಂಚಾಯ್ತಿಗಳು 6 ಹೋಬಳಿಗಳು ಒಂದು ನಗರ ಸಭೆಯನ್ನು ಒಳಗೊಂಡಿದೆ.

ಈ ತಾಲ್ಲೂಕು, ಗಂಗರು, ಚೋಳರು, ಹೊಯ್ಸಳರು, ವಿಜಯನಗರ ಮೈಸೂರುಒಡೆಯರ ಆಳ್ವಿಕೆಯಲ್ಲದೆ, ಬ್ರಿಟೀಷ್ ಆಡಳಿತಕ್ಕೆ ಒಳಪಟ್ಟಿದ್ದು, ಪ್ರಸ್ತುತ ರಾಮನಗರ ಜಿಲ್ಲೆಗೆ ಒಳಪಟ್ಟಿದೆ. ಕನಕಪುರ ತಾಲ್ಲೂಕು 1590 ಚ.ಕಿ. ಮೀ. [1,59,426 ಹೆಕ್ಟೇರ್] ವಿಸ್ತೀರ್ಣ ಹೊಂದಿರುವ ಈ ತಾಲ್ಲೂಕು ಕರ್ನಾಟಕದ ತಾಲ್ಲೂಕುಗಳಲ್ಲಿಯೇ ಎರಡನೇ ಅತಿ ದೊಡ್ಡ ತಾಲ್ಲೂಕಾಗಿದೆ. ಸಮುದ್ರ ಮಟ್ಟದಿಂದ 800–900 ಮೀಟರ್ ಎತ್ತರದಲ್ಲಿದೆ. ಈ ತಾಲ್ಲೂಕಿನ ಸರಾಸರಿ ಮಳೆಯ ಪ್ರಮಾಣ 805.2 ಮಿ.ಮೀ ಇದೆ.45262 ಹೆಕ್ಟೇರ್ ಅರಣ್ಯ ಪ್ರದೇಶವನ್ನು ಹೊಂದಿದೆ. ಉತ್ತರಕ್ಕೆ ರಾಮನಗರ, ಆನೇಕಲ್, ಬೆಂಗಳೂರು, ದಕ್ಷಿಣದಲ್ಲಿ ಜೀವನದಿಯಾಗಿ ಹರಿಯುತ್ತಿರುವ ಕಾವೇರಿ ನದಿ ಮತ್ತು ಕೊಳ್ಳೇಗಾಲ ತಾಲ್ಲೂಕು ಕಂಡು ಬರುತ್ತದೆ ಕನಕಪುರ ತಾಲ್ಲೂಕು ಹಿಪ್ಪುನೇರಳೆಯ ಎಲೆಯ ಆಕಾರದಲ್ಲಿದ್ದು ತಾಲ್ಲೂಕಿನ ಮಧ್ಯಭಾಗದಲ್ಲಿ ಅರ್ಕಾವತಿ ನದಿ ಹರಿದು ಹೋಗುತ್ತದೆ. ಇದು ಕಾವೇರಿ ನದಿಯನ್ನು ಸೇರಿ ಪ್ರವಾಸಿ ತಾಣವಾಗಿದೆ.ಆ ತಾಣವನ್ನು"ಸಂಗಮ" ಎಂದು ಹೆಸರಿಸಲಾಗಿದೆ. ಅರ್ಕಾವತಿ ನದಿಗೆ ಹಾರೋಬೆಲೆ ಸಮೀಪ ನಿರ್ಮಾಣಗೊಂಡಿರುವ ಅಣೆಕಟ್ಟಿನಿಂದ ಈ ತಾಲ್ಲೂಕಿನ ಬಹುಪಾಲು ಭಾಗಕ್ಕೆ ನೀರಾವರಿ ಸೌಲಭ್ಯವಾಗಿದೆ. ಇದರಿಂದ ಅಂತರ್ಜಲ ಹೆಚ್ಚಾಗಿ ನಿಂತು ಹೋಗಿದ್ದ ಕೊಳವೆ ಬಾವಿಗಳು ಮತ್ತೆ ನೀರಿನಿಂದ ತುಂಬಿ ಹರಿಯುತ್ತಿರುವುದು ಕಂಡು ಬರುತ್ತದೆ.

ಕನಕಪುರ ಇತಿಹಾಸವನ್ನು ಸಾರುವಂತಹ ನೂರಿಪ್ಪತ್ತೈದು ಶಾಸನಗಳಿವೆ ಎಂದು ಸಂಶೋಧಕರಾದ ಮಾಗಡಿ ತಾಲ್ಲೂಕಿನ ಡಾ॥ ಮುನಿರಾಜಪ್ಪನವರು ತಮ್ಮ ಲೇಖನದಲ್ಲಿ ಗುರುತಿಸಿದ್ದಾರೆ.ಕನಕಪುರ ತಾಲ್ಲೂಕು ಹೈದರಾಲಿ, ಟಿಪ್ಪು ಆಳ್ವಿಕೆಯಲ್ಲಿ ಸೈನಿಕರ ನೆಲೆಯಾಗಿತ್ತು. 1793–1799ರಲ್ಲಿ ಬ್ರಿಟಿಷರ ಸೇನೆ ಕನಕಪುರದ ಮೂಲಕ (ಕಾನಕಾನಹಳ್ಳಿ) ಶ್ರೀರಂಗಪಟ್ಟಣಕ್ಕೆ ತೆರಳಿತ್ತು ಕನಕಪುರ ಸಿಪಾಯಿಗಳ ಮಾರ್ಗವಾಗಿ ಮೈಸೂರನ್ನು ತಲುಪಲು ಪ್ರಮುಖ ಮಾರ್ಗವಾಗಿದ್ದು, ಈ ಮಾರ್ಗದಲ್ಲಿ ಬ್ರಿಟಿಷರ ಸೈನಿಕರನ್ನು ನಿಯಂತ್ರಿಸಲು ಟಿಪ್ಪುಸುಲ್ತಾನ್ ಕನಕಪುರಕ್ಕೆ ಎರಡು ಸಲ ಬೆಂಕಿಯನ್ನು ಇಡಿಸಿದ್ದನು ಎಂದು ತಿಳಿದು ಬರುತ್ತದೆ.

ಕನಕಪುರ ತಾಲ್ಲೂಕು ಭಾರತ ದೇಶದ ಸ್ವಾತಂತ್ರ್ಯ ಚಳುವಳಿಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ.ಮಹಾತ್ಮ ಗಾಂಧೀಜಿಯವರು 7ನೇ ಆಗಸ್ಟ್ 1927 ಮತ್ತು 6ನೇ ಜನವರಿ 1936ರಂದು ಕಾನಕನಹಳ್ಳಿಗೆ ಭೇಟಿ ನೀಡಿ ಸಾರ್ವಜನಿಕ ಸಭೆಗಳನ್ನು ಉದ್ದೇಶಿಸಿ ಮಾತನಾಡಿ ಜನರನ್ನು ಸ್ವಾತಂತ್ರ್ಯ ಹೋರಾಟದ ಚಳುವಳಿಗೆ ಪ್ರೇರೇಪಿಸಿದರು. ಈ ಪ್ರೇರಣೆಯಿಂದ ಶಿವಪುರ ಧ್ವಜ ಸತ್ಯಾಗ್ರಹ ಮತ್ತು ಮೈಸೂರು ಚಲೋ ಚಳುವಳಿಯಲ್ಲಿ ಕನಕಪುರ

ತಾಲ್ಲೂಕಿನ ಎಸ್.ಕರಿಯಪ್ಪನವರು, ಡಿ.ವಿ.ಸುಬ್ರಹ್ಮಣ್ಯಅಯ್ಯರ್, ಡಿ.ರಾಮಯ್ಯನವರು, ಡಿ.ವೆಂಕಟಚಲಪತಿ ಶೆಟ್ಟರು, ಮೂಲೆಮನೆ ನಂಜುಂಡಶಾಸ್ತ್ರಿಗಳು. ಕೆ.ಸುಬ್ಬರಾಯರು, ಕೆ.ಎಸ್.ನರಸಿಂಹಶಾಸ್ತ್ರಿಗಳು, ಹೆಚ್.ಆರ್.ಸೀನಪ್ಪನವರು, ಕೆ.ತಿಮ್ಮಪ್ಪ ರೆಡ್ಡಿಯವರು, ಎಂ.ಲಿಂಗೇಗೌಡರು, ಶ್ರೀನಿವಾಸಮೂರ್ತಿರವರು ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿ ತಾಲ್ಲೂಕಿನಲ್ಲಿರುವ ಪೀಳಿಗೆಗೆ ಆದರ್ಶವಾಗುವ ಮೂಲಕ ತಾಲ್ಲೂಕಿಗೆ ನಿಸ್ವಾರ್ಥ ಸೇವೆ ಸಲ್ಲಿಸಿರುವುದು ಐತಿಹಾಸಿಕ ಹಿನ್ನೆಲೆಯಾಗಿದೆ.

*ಕನಕಪುರ ತಾಲ್ಲೂಕಿನಿಂದ ಕೆಲವೇ ದೂರದಲ್ಲಿರುವ ಅಚ್ಚಲು, ನಾಯಕನಹಳ್ಳಿ ಮತ್ತು ಮಳಗಾಳು, ಶಾಸನಗಳಲ್ಲಿ ಕಾಣೆಕಾರ ಹಳ್ಳಿಯ ಉಲ್ಲೇಖವಿದೆ. ಫ್ರಾನ್ಸಿಸ್ ಬುಕನನ್ ಕಾಣೆಕಾರಹಳ್ಳಿಯ ನಾಮ ವಿವೇಚನೆ ಮಾಡುತ್ತ "ಕಾಣೆ ತಮಿಳು ಮೂಲದಿಂದಾಗಿದ್ದ 'ಗದ್ದೆ' ಎಂಬರ್ಥ ಹೊಂದಿದೆ.ಕಾಣೆಕಾರ ಎಂದರೆ ಭೂಮಾಲೀಕ ಎಂದಿದ್ದಾರೆ.ಆದರೆ ಕಾಡೆ ಎಂಬುದು ಪ್ರಾಚೀನ ಬಾರತದಲ್ಲಿ ರೂಢಿಯಲ್ಲಿದ್ದ ಐದುರತಿ ತೂಕದ ತಾಮ್ರದ ನಾಣ್ಯವೆಂಬುದು ಪ್ರಾಚೀನ ಭಾರತದ ಸಾಹಿತ್ಯಾಧಾರಗಳಿಂದ ತಿಳಿಯುತ್ತದೆ.

ಕನಕಪುರ ತಾಲ್ಲೂಕು ಹಲವಾರು ರಾಜರುಗಳ ಆಳ್ವಿಕೆಗೆ ಒಳಪಟ್ಟಿತ್ತು.*ಗಂಗರ ದೊರೆ 2ನೇ ರಾಚಮಲ್ಲನ ಕಾಲಕ್ಕೆ ಸಂಬಂಧಿಸಿದ ತುರಗೋಳ ಶಾಸನ ಸಾತನೂರಿನಲ್ಲಿದೆ. ಈ ಶಾಸನದಿಂದ ತಿಳಿದು ಬರುತ್ತದೆ ಹಾಗೂ ಚೋಳರ ಆಳ್ವಿಕೆಗೂ ಒಳಗಾಗಿದ್ದ ಎಂಬುದಕ್ಕೆ ಎಳಚವಾಡಿಯ ಶಾಸನ ತಿಳಿಸುತ್ತದೆ.ಮುಳ್ಳಹಳ್ಳಿ, ತುಂಗಣಿ ಮತ್ತು ಅಚ್ಚಲು ಶಾಸನದನ್ವಯ ಹೊಯ್ಸಳರ ಕೊನೆಯ ಪ್ರಸಿದ್ಧ ದೊರೆ ಮೂರನೇ ಬಿಲ್ಲಾಳನ ಸಾರ್ವಭೌಮತ್ವವನ್ನು ತಿಳಿಸುತ್ತವೆ. 1530ರ ನಲ್ಲಹಳ್ಳಿ ಶಾಸನದ ಪ್ರಕಾರ ಚನ್ನಪ್ಪ ಈ ಪ್ರಾಂತ್ಯವನ್ನಾಳಿದನು 1563ರಲ್ಲಿ ದೇವಪ್ಪ ಇಲ್ಲಿನ ರಾಜಕುಮಾರನಾಗಿದ್ದನು. ವಿಜಯನಗರ ಕಾಲಕ್ಕೆ ಚನ್ನಪಟ್ಟಣದ ಜಗದೇವರಾಯ ಕಾಣಿಕಾರನಹಳ್ಳಿ ಪ್ರಾಂತ್ಯದ ಮೇಲೆ ತನ್ನ ನಿಯಂತ್ರಣವನ್ನು ಹೊಂದಿದ್ದು ಅರ್ಕಾವತಿ ನದಿ ಸಮೀಪದ ಕೋಟೆ ಇವನಿಂದ ನಿರ್ಮಾಣವಾಗಿತ್ತು.

ಹೀಗೆ ಕನಕಪುರ ತಾಲ್ಲೂಕು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದ್ದು ತನ್ನದೇ ಆದ ಪರಂಪರೆಯನ್ನು ಹಿಂದಿನಿಂದಲೂ ಉಳಿಸಿಕೊಳ್ಳುವ ಮೂಲಕ ಕಾನಕಾನಹಳ್ಳಿಯಿಂದ ನಗರ ಸಭೆಯಾಗಿ ಕರ್ನಾಟಕದ ತಾಲ್ಲೂಕುಗಳಲ್ಲಿಯೇ ಎರಡನೇಯ ಅತಿ ದೊಡ್ಡ ಹಾಗೂ ತಾಲ್ಲೂಕುಗಳಲ್ಲಿಯೇ ಅತ್ಯಂತ ಹಿಂದುಳಿದ ತಾಲ್ಲೂಕಾಗಿದೆ.

**ಪೌರಾಣಿಕ ಹಿನ್ನೆಲೆ**

ಕನಕಪುರ ತಾಲ್ಲೂಕಿನ ಪ್ರದೇಶಗಳು ತ್ರೇತಾಯುಗದಲ್ಲಿ ಇದ್ದವೆಂಬುವುದನ್ನು ಹಲವು ಬೆಟ್ಟಗಳು ತಿಳಿಸಿಕೊಡುತ್ತದೆ. ಹೊಸದುರ್ಗ ಬೆಟ್ಟದ ದೇವಾಲಯವನ್ನು ರಾಮ ದೇವಾಲಯವೆಂದು ಕರೆಯಲಾಗುತ್ತದೆ. ರಾಮ ವನವಾಸದ ವೇಳೆಯಲ್ಲಿ ಬೆಟ್ಟದಲ್ಲಿ ನೆಲೆ ನಿಂತು ಆ ಬೆಟ್ಟದಲ್ಲಿ ಇದ್ದ ರಾಕ್ಷಸರನ್ನು ಹುಣಸನಹಳ್ಳಿಯಲ್ಲಿ ಐಕ್ಯವಾಗಿರುವ ಸೈಯ್ಯದ್ ಯುಸೂಫ್ ಷಾವಲಿಯೊಡನೆ ಸೇರಿ ಸಂಹರಿಸಿ ಆ ವಲಿಯವರು ರಾಮನಿಗೆ ಇಲ್ಲಿ ನೀನು ನೆಲೆಸು ಎಂದು ಹೇಳಿ ಹುಣಸನಹಳ್ಳಿಯ ಪಟೇಲರದೊಡ್ಡಿಯಲ್ಲಿ ಬಂದು ನೆಲೆಸಿದ್ದರು ಎಂಬ ಪೌರಾಣಿಕ ಐತಿಹ್ಯದ ಕಥೆಯನ್ನು ಆ ಊರಿನ ಹಿರಿಯರು ತಿಳಿಸುತ್ತಾರೆ.

ಸ್ಥಳ ಪುರಾಣದ ಪ್ರಕಾರ ತ್ರೇತಾಯುಗದಲ್ಲಿ ಸೀತಾದೇವಿ ರಾಮ ಮತ್ತು ಲಕ್ಷ್ಮಣರು ವನವಾಸಕ್ಕೆ ಬಂದ ಸಂಧರ್ಭದಲ್ಲಿ ಹೊಸದುರ್ಗ ಬೆಟ್ಟದಲ್ಲಿ ತಂಗಿದ್ದರು.ಆದ ಕಾರಣ ಈ ಬೆಟ್ಟಕ್ಕೆ ರಾಮ ನೆಲೆಸಿದ್ದ ಸ್ಥಳವೆಂದು ಕರೆಯುವುದರ ಮೂಲಕ ರಾಕ್ಷಸರ ನಿರ್ಮೂಲನೆ ಮಾಡಿದ ಪವಾಡ ಈ ಬೆಟ್ಟದ ಪೌರಾಣಿಕ ಹಿನ್ನೆಲೆಯಾಗಿದೆ.

ಮತ್ತೊಂದು ಜನಪದ ಕಥೆಯ ಪ್ರಕಾರ ಹೊಸದುರ್ಗ ಬೆಟ್ಟದಲ್ಲಿ ರಾಕ್ಷಸರು ಇದ್ದರು.ಅವರು ಹೊಸದುರ್ಗ ಮತ್ತು ಸುತ್ತ ಮುತ್ತಲಿನ ಊರಿನವರ ಮಕ್ಕಳನ್ನು ಸಾಯಿಸುತ್ತಿದ್ದರು. ಹಾಗೂ ದನ, ಕರು, ಮೇಕೆ, ಕುರಿ, ಮೇಯಿಸಲು ಹೋಗುತ್ತಿದ್ದವರನ್ನು ರಾಕ್ಷಸರು ಸಾಯಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ರಾಮ ಸೀತಾದೇವಿ, ಲಕ್ಷ್ಮಣರು ಇಲ್ಲಿ ನೆಲೆ ನಿಂತು ಹೊಸದುರ್ಗ ಬೆಟ್ಟದ ಸುತ್ತಮುತ್ತಲ್ಲಿನ ಹಳ್ಳಿಗಳಿಗೆ ಆಗುತ್ತಿದ್ದ ರಾಕ್ಷಸರ ತೊಂದರೆಯನ್ನು ನಿವಾರಿಸಲು ರಾಕ್ಷಸರನ್ನ ಸಂಹರಿಸಿ ಹೊಸದುರ್ಗದ ಜನರಿಗೆ ರಾಕ್ಷಸರಿಂದ ಮುಕ್ತಿಯನ್ನು ಕೊಡಿಸಿದರು.ಇದರಿಂದ ಮುಕ್ತಿ ಪಡೆದ ದುರ್ಗದ ಜನರ ರಾಮನ ದೇವಾಲಯವನ್ನು ನಿರ್ಮಿಸಿ ಪ್ರತಿದಿನ ಪೂಜೆ ಮಾಡುತ್ತಿರುವುದು ಕಂಡುಬರುತ್ತದೆ.ಬೆಟ್ಟದಮೇಲೆ ಮತ್ತು ಹೊಸದುರ್ಗದ ಊರಿನಲ್ಲಿಯೂ ರಾಮನ ಮಂದಿರವನ್ನು ಕಾಣಬಹುದು.ಈ ರಾಮನ ಮಂದಿರವು ತ್ರೇತಾಯುಗದಲ್ಲಿ ನಿರ್ಮಿಸಲಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

*ಮತ್ತೊಂದು ಜನಪದ ಕಥೆಯ ಪ್ರಕಾರ ಕನಕಪುರ ತಾಲ್ಲೂಕು ನಾರಾಯಣಪುರ ಮತ್ತು ಚಾಕನಹಳ್ಳಿ ಗ್ರಾಮ ಪಂಚಾಯತಿಗೆ ಸೇರುವ ಕೆರಳಾಳುಸಂದ್ರ, ಬೆಟ್ಟಹಳ್ಳಿ ಎರಡು ಗ್ರಾಮಗಳ ನಡುವೆ ಇರುವ ಅರಣ್ಯ ಪ್ರದೇಶದಲ್ಲಿ "ಭೀರಪ್ಪನ" ದೇವಸ್ಥಾನ ಕಾಡಿನಲ್ಲಿದೆ. ಇಲ್ಲಿ ತ್ರೇತಾಯುಗದಲ್ಲಿ 'ಬೀರಪ್ಪ' ಎಂಬ ಒಬ್ಬ ರಾಮನ ಭಕ್ತ ನಿದ್ದನು ಇವನು ದನಗಳನ್ನು

ಮೇಯಿಸಲು ಕಾಡಿಗೆ ಬಂದಿದ್ದಾಗ ದನಗಳಿಗೆ ನೀರು ಎಲ್ಲಿಯು ಸಿಕ್ಕದಿರುವಾಗ ರಾಮನನ್ನು ಬೇಡಿಕೊಂಡು ತನ್ನ ಹರಿತವಾದ ಖಡ್ಗವನ್ನು ಒಂದು ಮರಕ್ಕೆ ಕಟ್ಟಿ ಮೇಲಿನಿಂದ ಹಾರಿ ಬಿದ್ದು ಕತ್ತನ್ನು ಕತ್ತರಿಸಿ ಕೊಳ್ಳುತ್ತಾನೆ. ಆಗ ಅವನ ರಕ್ತ ಹರಿದು ಆ ರಕ್ತ ಹರಿದ ಜಾಗ ಹಳ್ಳವಾಗಿ ನೀರು ಹರಿಯುವ ಸ್ಥಳವಾಗಿ ಅಂದಿನಿಂದ ಇಂದಿನ ವರೆಗೂ ಅಲ್ಲಿ ವರ್ಷದ 365ದಿನಗಳು ಸಹ ನೀರು ಹಳ್ಳದ ಗಂಡಿಗಳಲ್ಲಿ ಇರುವುದು ಕಂಡು ಬರುತ್ತದೆ.

ಈ ಸ್ಥಳಕ್ಕೆ ಭೇಟಿಯಾಗಿ ಕ್ಷೇತ್ರ ಕಾರ್ಯವನ್ನು ಮಾಡಲು ಸ್ಥಳೀಯ ಹಿರಿಯರಿಗೆ ಬೇಡಿಕೆ ಇಟ್ಟಾಗ ಆ ಪ್ರದೇಶ ದಟ್ಟ ಅರಣ್ಯದಿಂದ ಕೂಡಿರುವುದರಿಂದ ಅಲ್ಲಿ ನೀರು ದೊರೆಯುವುದರಿಂದ ಕಾಡಿನ ಪ್ರಾಣಿಗಳಾದ ಆನೆ, ಚಿರತೆ, ಮಟ್ಕ, ಕರಡಿಗಳಿರುತ್ತವೆ. ಎಂದು ಯಾರು ಆ ಪ್ರದೇಶಕ್ಕೆ ಹೋಗುವುದಿಲ್ಲ. ಪ್ರತಿವರ್ಷ 'ಬೀರಪ್ಪನ್ನ' ಹೆಸರಿನಲ್ಲಿ ಕಾಡಿನಲ್ಲಿ ಇರುವ ಹೊಸಕೆರೆಯಲ್ಲಿ ಅನ್ನದಾನ ಮಾಡಲಾಗುತ್ತದೆ. ಆ ಸಂದರ್ಭದಲ್ಲಿ ಪಟಾಕಿ ಸಿಡಿಸುವ ಮೂಲಕ ಗುಂಪು-ಗುಂಪಾಗಿ ಜನರು ಹೋಗಿ "ಬೀರಪ್ಪನ" ಗುಡಿಗೆ ಪೂಜೆ ಸಲ್ಲಿಸಿ ಹೆಚ್ಚು ಕಾಲ ಅಲ್ಲಿ ಇರದೇ ಹಿಂದಿರುಗುತ್ತಾರೆ.ಹೀಗೆ ಕನಕಪುರದ ಕೆಲವು ಸ್ಥಳಗಳ ಬಗ್ಗೆ ಜನಪದ ಕಥೆಗಳಿವೆ.

ಮೇಲಿನ ಜನಪದ ಪುರಾಣ ಕಥೆಗಳಿಂದ ಕನಕಪುರ ತಾಲ್ಲೂಕಿನ ರಾಮ, ಸೀತಾದೇವಿ, ಲಕ್ಷ್ಮಣರು ವನವಾಸಕ್ಕೆ ಇಲ್ಲಿಗೆ ಬಂದಿದ್ದರು, ಬಂದು ನೆಲೆಸಿದ್ದರು ಎಂಬುದಕ್ಕೆ ತಾಲ್ಲೂಕಿನಲ್ಲಿ ಕಂಡು ಬರುವ ರಾಮ, ಮತ್ತು ಹನುಮನ ದೇವಸ್ಥಾನಗಳು ತಿಳಿಸಿಕೊಡುತ್ತವೆ ಹಾಗೆಯೇ ಕನಕಪುರದಲ್ಲಿ ಇರುವಂತಹ ಕೋಟೆ ಆಂಜನೇಯ ದೇವಸ್ಥಾನ ಮತ್ತು ರಾಮಮಂದಿರವು ಕನಕಪುರದ ಪೌರಾಣಿಕ ಹಿನ್ನೆಲೆಯನ್ನು ತಿಳಿಸಿ ಕೊಡುತ್ತವೆ. ಜನಪದ ಸಂಸ್ಕೃತಿಯಲ್ಲಿ ಜನರ ನಂಬಿಕೆ, ಆಚಾರ-ವಿಚಾರಗಳು ಅಪಾರವಾದ ನಂಬಿಕೆಗಳಿಂದ ಅವರ ಹೆಸರಿನಲ್ಲಿ ನಡೆಯುವ ಪೂಜೆ ಉತ್ಸವಗಳು ಆಚರಿಸಿಕೊಂಡು ಮಹಾನ್ ಪುರುಷರನ್ನು ನೆನೆದು ಸಂಭ್ರಮದಲ್ಲಿ ಭಾಗಿಯಾಗುವುದು ಸಂತೋಷದ ಸಂಗತಿಯಾಗಿದೆ. ಹೀಗೆ ರಾಮನು ಬೇರೆ-ಬೇರೆ ಗಿರಿಗಳಲ್ಲಿ ನೆಲೆ ನಿಂತಿದ್ದ ಎಂಬುದು ಕನಕಪುರ ಒಳಗೊಂಡಂತೆ ರಾಮನಗರ ಜಿಲ್ಲೆಯಲ್ಲಿರುವ ಹಲವು ಬೆಟ್ಟಗಳು ಮತ್ತು ದೇವಾಲಯಗಳಿಂದ ಗುರುತಿಸ ಬಹುದಾಗಿದೆ.ಪ್ರಪಂಚದಲ್ಲಿಯೇ ಪ್ರಮುಖ ಐತಿಹಾಸಿಕ ಮತ್ತು ಪೌರಾಣಿಕ ಹಿನ್ನೆಲೆಯನ್ನು ಹೊಂದಿರುವ ವಿಜಯನಗರವಾದ ಹಂಪಿಯಲ್ಲಿ ರಾಮ ಸೀತಾದೇವಿ ಮತ್ತು ಲಕ್ಷ್ಮಣರು ನೆಲೆಸಿದ್ದರು ಎಂಬ ಕುರುಹುಗಳಿವೆ. ಹೀಗೆಯೇ

* ಕನಕಪುರ ತಾಲ್ಲೂಕಿನ ಐತಿಹಾಸಿಕ – ಹರಿಣಾಟವಿ – ಡಾ॥ ಮುನಿರಾಜಪ್ಪ

ಕನಕಪುರದ ಪೌರಾಣಿಕ ಹಿನ್ನೆಲೆಯ ಬಗ್ಗೆ ಹಲವು ಕುರುಹುಗಳೂ ದೊರೆಯುತ್ತವೆ. ಏನೇ ಆಗಲಿ ರಾಮ, ಸೀತಾದೇವಿ, ಲಕ್ಷ್ಮಣರು ಜೀವಿಸಿದ್ದರು ಅವರು ವನವಾಸದ ಸಂದರ್ಭದಲ್ಲಿ ಈ ಕನಕಪುರ ಪ್ರದೇಶದಲ್ಲಿ ನೆಲೆಸಿದ್ದರು ಎಂಬ ಅನೇಕ ಆಧಾರಗಳು ಜನಪದ ಕಥೆಗಳು ಹಾಗೂ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ದೊರೆತ ಮಾಹಿತಿ ಮತ್ತು ದೇವಾಲಯಗಳಿಂದ ರಾಮ, ಸೀತಾದೇವಿ, ಲಕ್ಷ್ಮಣರ ಕುರುಹುಗಳು ಹೆಚ್ಚಾಗಿ ಕಂಡು ಬರುವುದರಿಂದ ಈ ಪ್ರದೇಶವು ಪೌರಾಣಿಕವಾಗಿ ಪ್ರಸಿದ್ಧಿ ಪಡೆದುಕೊಳ್ಳುವ ಮೂಲಕ ಪೌರಾಣಿಕ ವಿಷಯಗಳನ್ನು ಒಳಗೊಂಡ ಪ್ರದೇಶವು ಕಾನಕಾನಹಳ್ಳಿಯಿಂದ ಕನಕಪುರವಾಗಿದೆ.

**ತಾಲ್ಲೂಕಿನ ಮೇರೆಗಳು**

ಕನಕಪುರ ತಾಲ್ಲೂಕು ಒಟ್ಟು 6 ಹೋಬಳಿಗಳಿಂದ ಒಳಗೊಂಡಿದೆ. ಕನಕಪುರ ಅರ್ಕಾವತಿ ನದಿಯ ಬಲದಂಡೆಯ ಮೇಲಿರುವ ಕನಕಪುರವು ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಿಂದ 56ಕಿ.ಮೀ ದೂರದಲ್ಲಿದೆ.ಉತ್ತರದಲ್ಲಿ ರಾಮನಗರ, ಬೆಂಗಳೂರು, ದಕ್ಷಿಣ ಮತ್ತು

ಆನೇಕಲ್. ದಕ್ಷಿಣದಲ್ಲಿ ನಿರಂತರವಾಗಿ ಹರಿಯುತ್ತಿರುವ ಕಾವೇರಿ ನದಿ ಮತ್ತು ಕೊಳ್ಳೇಗಾಲ ಪಶ್ಚಿಮದಲ್ಲಿ ಚನ್ನಪಟ್ಟಣ ಮತ್ತು ಮಳವಳ್ಳಿ ತಾಲ್ಲೂಕುಗಳಿವೆ. ಪೂರ್ವಕ್ಕೆ ತಮಿಳುನಾಡಿನ ಗಡಿಯಾಗಿದೆ.ಕನಕಪುರ ಮತ್ತು ತಮಿಳುನಾಡಿನ ಗಡಿಯಲ್ಲಿ ಕಾವೇರಿ ನದಿಯು ಹರಿಯುವುದು.ಎರಡು ಪ್ರದೇಶಗಳನ್ನು ಬೇರ್ಪಡಿಸಿದೆ ಎಂದು ಸಂಗಮದ ಮೇಕೆದಾಟು ನೋಡಿದ ಕ್ಷಣದಲ್ಲಿ ಭಾಸವಾಗುತ್ತದೆ.

ಮಹದೇಶ್ವರಬೆಟ್ಟ ಮತ್ತು ಸಂಗಮವನ್ನು ಬೇರ್ಪಡಿಸಿ ಕನಕಪುರ ತಾಲ್ಲೂಕಿನ ಅಂಚಿನಲ್ಲಿ ಕಾವೇರಿ ನದಿ ಹಾದು ಹೋಗುತ್ತದೆ. ಹೀಗೆ ಭೌಗೋಳಿಕ ಮತ್ತು ಆರ್ಥಿಕ ದೃಷ್ಟಿಯಿಂದ ಕನಕಪುರ ಉತ್ತಮ ಭೌಗೋಳಿಕ ವಾತಾವರಣ ಹೊಂದಿದೆ ಎಂದು ತಿಳಿಯಬಹುದಾಗಿದೆ.

**ಕನಕಪುರ ತಾಲ್ಲೂಕಿನ ವಿಸ್ತೀರ್ಣ**

ಕನಕಪುರ ತಾಲ್ಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣವು 1601 ಚ.ಕಿ.ಮೀಗಳಾಗಿದ್ದು ಒಟ್ಟು 6 ಹೋಬಳಿಗಳನ್ನು ಹೊಂದಿದೆ.ಜನಸಾಂದ್ರತೆಯಲ್ಲಿ ಪ್ರತಿ ಚ.ಕಿ.ಮೀ.ಟರ್‌ಗಳಿಗೆ 211ರಲ್ಲಿ ಇದೆ. ರಾಮನಗರ ಜಿಲ್ಲೆಯ ನಾಲ್ಕು ತಾಲ್ಲೂಕುಗಳಾದ ಚನ್ನಪಟ್ಟಣ, ಮಾಗಡಿ, ರಾಮನಗರ, ಕನಕಪುರ ತಾಲ್ಲೂಕುಗಳಲ್ಲಿ ಕನಕಪುರ ತಾಲ್ಲೂಕು ಅತೀ ದೊಡ್ಡ ತಾಲ್ಲೂಕಾಗಿದೆ. ಈ ತಾಲ್ಲೂಕಿನ ಹೆಚ್ಚಿನ ಭೂಭಾಗ ಅರಣ್ಯ ಪ್ರದೇಶವನ್ನು ಆವರಿಸಿಕೊಂಡಿದೆ.

*ವಕ್ತೃ ಪೀಚೇಗೌಡ, ಕೆರಳಾಳುಸಂದ್ರ, ವಯಸ್ಸು : 70

ರಾಮನಗರ ಜಿಲ್ಲೆ 4 ತಾಲ್ಲೂಕುಗಳಲ್ಲಿ ಕನಕಪುರ ತಾಲ್ಲೂಕು ಅತೀ ಹಿಂದುಳಿದಿರುವ ತಾಲ್ಲೂಕು ಇದಾಗಿದೆ.ಇಡೀ ಕರ್ನಾಟಕ ರಾಜ್ಯದ ತಾಲ್ಲೂಕುಗಳಲ್ಲಿ ಅತ್ಯಂತ ಹಿಂದುಳಿದಿರುವ ತಾಲ್ಲೂಕು ಎಂದು ನಂಜುಂಡಪ್ಪ ವರದಿಯಲ್ಲಿ ನಮೂದಿಸಲಾಗಿದೆ.ಇಂತಹ ಹಿಂದುಳಿದಿರುವ ತಾಲ್ಲೂಕಿನಲ್ಲಿ *239 ಹಳ್ಳಿಗಳು 43 ಗ್ರಾಮ ಪಂಚಾಯಿತಿಗಳು 6 ಹೋಬಳಿಗಳು 1 ನಗರ ಸಭೆಯನ್ನು ಒಳಗೊಂಡಿದೆ. ಒಟ್ಟು ತಾಲ್ಲೂಕಿನ ಹಳ್ಳಿಗಳಲ್ಲಿ 219 ಹಳ್ಳಿಗಳಲ್ಲಿ ಜನ ವಾಸವಾಗಿದ್ದು ಉಳಿದ 20 ಹಳ್ಳಿಗಳಲ್ಲಿ ಜನ ವಾಸವಾಗಿಲ್ಲದ ಜನರಹಿತವಾದವುಗಳಾಗಿವೆ. ಒಟ್ಟು 3,37,208 ರಷ್ಟು ಜನಸಂಖ್ಯೆ ಹೊಂದಿರುವ ಈ ತಾಲ್ಲೂಕಿನಲ್ಲಿ ಪುರುಷರು 173720 ರಷ್ಟು ಮಹಿಳೆಯರು1,63,,488 ರಷ್ಟಿದ್ದಾರೆ. ಒಟ್ಟಾರೆಯಾಗಿ ತಾಲ್ಲೂಕಿನ ಲಿಂಗ ಪ್ರಮಾಣದ ಸರಾಸರಿಯಲ್ಲಿ 941 ರಷ್ಟಿದೆ ಈ ತಾಲ್ಲೂಕಿನಲ್ಲಿರುವ ಮಹಿಳಾ ವಿದ್ಯಾವಂತರು 5,41,34 ರಷ್ಟಿದ್ದಾರೆ ಪುರುಷ ವಿದ್ಯಾವಂತರು 8276 ರಷ್ಟಿದ್ದಾರೆ

ಈ ಜನಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಪರಿಶಿಷ್ಟ ಸಮುದಾಯ ಮಹಿಳೆಯರು 28,519 ರಷ್ಟಿದ್ದಾರೆ ಪುರುಷರು 29,962 ರಷ್ಟಿದ್ದಾರೆ ನಗರ ಭಾಗದಲ್ಲಿ ಪರಿಶಿಷ್ಟ ಸಮುದಾಯದ ಪುರುಷರು 2903 ಮಹಿಳೆಯರು 2705ರಷ್ಟಿದ್ದಾರೆ.ಈ ತಾಲ್ಲೂಕಿನಲ್ಲಿ ಅಲ್ಪಸಂಖ್ಯಾತ ಸಮುದಾಯದವರು ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಮುಸ್ಲಿಂ ಸಮುದಾಯದವು.15504, ಕ್ರಿಶ್ಚಿಯನ್ನರು 3735, ಜೈನರು 339 ಸಿಖ್ಖರು 15, ಬೌದ್ಧರು 573ರಷ್ಟು ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದವರಾಗಿದ್ದಾರೆ.

## ವಾಯುಗುಣ

ಕನಕಪುರ ತಾಲ್ಲೂಕು ಕರ್ನಾಟಕದಲ್ಲಿ 2ನೇಯ ಅತ್ಯಂತ ದೊಡ್ಡ ತಾಲ್ಲೂಕು. ಸಮುದ್ರ ಮಟ್ಟದಿಂದ 800 ರಿಂದ 900 ಮೀ ಎತ್ತರದಲ್ಲಿರುವ ಈ ತಾಲ್ಲೂಕಿನ ಸರಾಸರಿ ಮಳೆಯ ಪ್ರಮಾಣವು 805.2 ಮಿ.ಮೀ, 45262 ಹೆಕ್ಟೇರ್ ಅರಣ್ಯ ಪ್ರದೇಶವಿದೆ ಎಂಬ ದಾಖಲೆ ಇದೆ. ಈ ತಾಲ್ಲೂಕು ಸುತ್ತಲೂ ಬೆಟ್ಟಗುಡ್ಡ ಕಲ್ಲುಗಳಿಂದ ಕೂಡಿದ ಭೂ ಪ್ರದೇಶವಾಗಿದೆ.ಇಂತಹ ಪ್ರಕೃತಿಯ ಮಡಿಲಿನಲ್ಲಿರುವ ಈ ಪ್ರದೇಶದಲ್ಲಿ ಜೂನ್‌ನಿಂದ ನವಂಬರ್ ತಿಂಗಳ ಅವಧಿಯಲ್ಲಿ ಶೇ 80 ರಷ್ಟು ಮಳೆಯಾಗುತ್ತದೆ. ಕನಕಪುರ ತಾಲ್ಲೂಕಿನಲ್ಲಿ ಹವಾಗುಣದ ಗಾಳಿಯ ವೇಗ ಗಂಟೆಗೆ 18 ಕಿ.ಮೀನಷ್ಟಿದೆ. ಇದರ ತಾಪಮಾನ ಕನಿಷ್ಟ $14.30^0$ ಇದ್ದ ಗರಿಷ್ಠ $39.19^0$ ಆಗಿದೆ.ತಾಲ್ಲೂಕಿನಾದ್ಯಂತ ಒಂದು ವೃಷ್ಟಿಮಾಪನ ಕೇಂದ್ರವಿದೆ.

* ಹರಣಾಟವಿ ಡಾ॥ ಮುನಿರಾಜಪ್ಪ – ಪುಟ – ಸಂಖ್ಯೆ – 81

## ಮಣ್ಣಿನ ಲಕ್ಷಣ

ಕನಕಪುರ ತಾಲ್ಲೂಕಿನಲ್ಲಿ 50593 ಹೆಕ್ಟೇರ್ ಭೂಮಿ ವ್ಯವಸಾಯಕ್ಕೆ ಯೋಗ್ಯವಾಗಿದೆ.ಇದು ಜೇಡಿಮಣ್ಣು ಕಪ್ಪುಮಣ್ಣು, ಕೆಂಪುಮಣ್ಣು, ಮರಳು ಮಿಶ್ರಿತ ಮಣ್ಣು ಮತ್ತು ಕಲ್ಲು ಮಿಶ್ರಿತ ಮಣ್ಣುಗಳಿಂದ ಕೂಡಿದ ಪ್ರದೇಶವಾಗಿದೆ.ಈ ಗುಣವನ್ನು ಹೊಂದಿರುವ ಮಣ್ಣಿನಲ್ಲಿ ಹೆಚ್ಚಾಗಿ ವ್ಯವಸಾಯ ಮಾಡಲಾಗುತ್ತದೆ.ಜೇಡಿಮಣ್ಣನ್ನು ಬಳಸಿಕೊಂಡು ಮಡಿಕೆ ಮತ್ತು ಇತರೆ ಗೃಹ ಉಪಯೋಗಿ ವಸ್ತುಗಳನ್ನು ಮಾಡಲಾಗುತ್ತದೆ.ಕಪ್ಪುಮಣ್ಣಿನಲ್ಲಿ ಭತ್ತ, ಕಬ್ಬು ಬೆಳೆಗಳನ್ನು ಬೆಳೆಯಲಾಗುತ್ತದೆ.ಕಪ್ಪುಮಣ್ಣಿನಲ್ಲಿ ರಾಗಿ, ಜೋಳ, ಗೆಣಸು ರೇಷ್ಮೆಕಡ್ಡಿ, ಕಡಲೇಕಾಯಿ, ತೊಗರಿ, ಅವರೆ.ಎಳ್ಳು ಬೆಳೆಯನ್ನು ಬೆಳೆಯಲಾಗುತ್ತದೆ.ನೀರಾವರಿಯನ್ನು ಹೊಂದಿರುವ ಭೂಮಿಯಲ್ಲಿ ತರಕಾರಿ, ಸೊಪ್ಪನ್ನು ಬೆಳೆಯಲಾಗುತ್ತದೆ.ಜೇಡಿಮಣ್ಣು ಮತ್ತು ಕೆಂಪುಮಣ್ಣನ್ನು ಇಟ್ಟಿಗೆ ತಯಾರಿಸಲು ಬಳಸಲಾಗುತ್ತದೆ.ಅರ್ಕಾವತಿ ಮತ್ತು ಕಾವೇರಿ ನದಿ ಹರಿಯುವುದರಿಂದ ಮರಳು ಸಂಪತ್ತನ್ನು ಒಳಗೊಂಡಿದೆ.ಈ ತಾಲ್ಲೂಕು ಕಲ್ಲಿನ ಖನಿಜ ಸಂಪತ್ತು ಹೆಚ್ಚಾಗಿ ಹೊಂದಿರುವುದರಿಂದ ಗ್ರಾನೈಟ್, ಗಣಿಗಾರಿಕೆಗಳು ತಾಲ್ಲೂಕಿನಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.ಇದರಿಂದ ಅರಣ್ಯ ಸಂಪತ್ತು ನಾಶವಾಗಿ ಪರಿಸರ ಮಾಲಿನ್ಯದ ಜೊತೆಗೆ ಅರಣ್ಯ ವಾಸಿಗಳಾದ ಪ್ರಾಣಿ, ಪಕ್ಷಿಗಳಿಗೆ ನೆಲೆ ಇಲ್ಲದಂತಾಗಿದೆ.

## ನೀರಾವರಿ

ಈ ತಾಲ್ಲೂಕಿನಲ್ಲಿ ನೀರಾವರಿಯನ್ನು ಬಹುತೇಕವಾಗಿ ಮಳೆಯ ನೀರನ್ನು ಆಶ್ರಯಿಸಲಾಗಿದೆ.ಮಳೆಯಿಂದ ಕುಂಟೆ, ಕೆರೆ, ಕೊಳವೆಬಾವಿ ಬಾವಿಗಳು ತುಂಬಿದರೆ ಈ ಪ್ರದೇಶದ ಜನರಿಗೆ ನೀರಿನ ಪೂರೈಕೆಯಾಗುತ್ತದೆ.ಕುಡಿಯುವ ನೀರಿಗಾಗಿ ಈ ಪ್ರದೇಶದ ಜನರು ಕೊಳವೆ ಬಾವಿಗಳನ್ನು ಆಶ್ರಯಿಸಿದ್ದಾರೆ.ಕನಕಪುರ ಮತ್ತು ಸಾತನೂರು ಪ್ರದೇಶಕ್ಕೆ ಕಾವೇರಿ ನೀರನ್ನು ಬಳಸಿಕೊಳ್ಳುತ್ತಿದ್ದಾರೆ ಈ ತಾಲ್ಲೂಕಿನಲ್ಲಿ 200 ಕ್ಕೂ ಹೆಚ್ಚು ಕೆರೆಗಳಿವೆ ಇವುಗಳಲ್ಲಿ ಮಾವತ್ತೂರು ಕೆರೆ ಮತ್ತು ದೊಡ್ಡಆಲಹಳ್ಳಿ ಕೆರೆಗಳು ದೊಡ್ಡವು.ಈ ಕೆರೆಗಳಿಂದ ಈ ತಾಲ್ಲೂಕಿನ ಜನರ ವ್ಯವಸಾಯಕ್ಕೆ ನೀರಿನ ಪೂರೈಕೆಯಾಗುತ್ತದೆ. ತಾಲ್ಲೂಕಿನಲ್ಲಿ ಒಂದು ಜಲಾಶಯವಿದೆ ಅದು ಹಾರೋಬೆಲೆ ಡ್ಯಾಂ ಇದ್ದರು ಸಮರ್ಪಕವಾದ ನೀರನ್ನು ಸಲ್ಲಿಸಲು ಸಾಧ್ಯವಾಗುತ್ತಿಲ್ಲ. ಈ ಡ್ಯಾಂನ ಸುತ್ತಮುತ್ತ ಪ್ರಭಾವಿ ವ್ಯಕ್ತಿಗಳ ಗ್ರಾನೈಟ್ ಗಣಿಗಾರಿಕೆ ನಡೆಯುವುದರಿಂದ ಡ್ಯಾಂಮಿನ ಸಮರ್ಪಕವಾದ ಬಳಕೆ ಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ ಎಂದು ಡ್ಯಾಂಗೆ ಭೇಟಿ ನೀಡಿದಾಗ

ಅಲ್ಲಿನ ಸ್ಥಳೀಯ ಜನರ ಅಭಿಪ್ರಾಯವಾಗಿದೆ. ಇದರಿಂದ ಡ್ಯಾಂ ನೀರಾವರಿಗೆ ಸಂಪೂರ್ಣವಾಗಿ ಬಳಸಲಾಗದೆ ರೈತರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ತಾಲ್ಲೂಕಿನಲ್ಲಿ ಹರಿಯುವ ಕಾವೇರಿ ನೀರನ್ನು ತಾಲ್ಲೂಕಿಗೆ ಬಳಸಿಕೊಳ್ಳಲಾಗುವುದಿಲ್ಲ. ಈ ನದಿಯು ತಾಲ್ಲೂಕಿನ ಅಂಚಿನಲ್ಲಿ ಬಹಳ ಆಳವಾದ ಪ್ರದೇಶದಲ್ಲಿ ಹರಿಯುವುದರಿಂದ ಈ ನದಿಯ ನೀರನ್ನು ಬಳಸಿಕೊಳ್ಳಲಾಗುತ್ತಿಲ್ಲ. ತಾಲ್ಲೂಕಿನ ಒಳಭಾಗದಲ್ಲಿಯೇ ಹರಿದು ಹೋಗುವ ಅರ್ಕಾವತಿ ನದಿಯು ಕಲುಶಿತಗೊಂಡಿದೆ. ಬೆಂಗಳೂರಿನ ನಾಗರಬಾವಿಯಲ್ಲಿನ ಇರುವ ಬೆಂಗಳೂರು ವಿಶ್ವವಿದ್ಯಾಲಯ ಆವರಣದಿಂದ ಹುಟ್ಟಿ ಹರಿಯುವ ವೃಷಭಾವತಿ ನದಿಗೆ ಬೆಂಗಳೂರಿನ ಕೈಗಾರಿಕೆಗಳಿಂದ ಹೊರ ಬರುವ ರಾಸಾಯನಿಕ ನೀರು ನದಿಗೆ ಸೇರಿ ವೃಷಭಾವತಿ ನದಿ ನೀರನ್ನು ಕಲುಷಿತಗೊಳಿಸುತ್ತದೆ. ಈ ನದಿ ಅರ್ಕಾವತಿ ನದಿಗೆ ಸೇರಿ ಅರ್ಕಾವತಿ ನದಿಯ ನೀರನ್ನು ಕಲುಷಿತಗೊಳಿಸಿರುವ ಪರಿಣಾಮವಾಗಿ ಈ ನದಿಯ ನೀರು ಕುಡಿಯಲು ಅಥವಾ ಕೃಷಿ ಚಟುವಟಿಕೆಗೆ ಬಳಸಲು ಯೋಗ್ಯವಾಗಿಲ್ಲ. ತಾಲ್ಲೂಕಿನ ಅಂಚಿನಲ್ಲಿಯೇ ಹರಿದು ತಮಿಳುನಾಡು ಸೇರುತ್ತಿರುವ ಕಾವೇರಿ ನದಿ ನೀರನ್ನು ಬಳಸಿಕೊಳ್ಳದಿರುವುದು ಕನಕಪುರ ತಾಲ್ಲೂಕಿನ ಜನತೆಯ ಅಜ್ಞಾನ ಮತ್ತು ನಾಯಕರುಗಳ ಪ್ರದೇಶದ ಅಭಿವೃದ್ಧಿಯನ್ನು ತಿಳಿಸಿಕೊಡುತ್ತದೆ.

ಕನಕಪುರ ತಾಲ್ಲೂಕಿನ ಕಾವೇರಿ ಅರ್ಕಾವತಿ ನದಿಗಳು ಹರಿಯುತ್ತಿದ್ದರು, ಅನೇಕ ಕಾರಣಗಳಿಂದ ಆ ನೀರನ್ನು ಬಳಸಲಾಗದೆ ಈ ತಾಲ್ಲೂಕಿನ ಜನತೆ ಕುಡಿಯುವ ನೀರು ವ್ಯವಸಾಯಕ್ಕೆ ಹಾಗೂ ಇನ್ನಿತರ ಬಳಕೆಗೆ ಸಮರ್ಪಕವಾದ ನೀರು ದೊರೆಯದೆ ನೀರಿನ ಸಮಸ್ಯೆಗಳನ್ನು ಎದುರಿಸುತ್ತಿರುವುದು.ತಾಲ್ಲೂಕಿನಾದ್ಯಂತ ಕಂಡು ಬರುತ್ತದೆ. ಈ ತಾಲ್ಲೂಕಿನಲ್ಲಿ ನೀರಾವರಿಯ ಸೌಕರ್ಯವು ಅತಿ ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದಾಗಿದೆ.

**ಅರಣ್ಯ ಪ್ರದೇಶ**

ಕನಕಪುರ ತಾಲ್ಲೂಕು 45262 ಹೆಕ್ಟೇರ್ ಅರಣ್ಯ ಪ್ರದೇಶವನ್ನು ಹೊಂದಿದೆ. ಈ ತಾಲ್ಲೂಕಿನ ಪ್ರಮುಖ ಬೆಟ್ಟಗಳೆಂದರೆ ಕಬ್ಬಾಳು ಬೆಟ್ಟ, ಬಿಳಿಕಲ್‌ಬೆಟ್ಟ, ಬೆಟ್ಟಹಳ್ಳಿಬೆಟ್ಟ ಶಿವಾಲದಪ್ಪನಬೆಟ್ಟ, ಗುಲ್‌ಕಲ್‌ಬೆಟ್ಟ, ಮುದವಾಡಿಬೆಟ್ಟ, ಅಚ್ಚಲು ಬೆಟ್ಟ, ಹೊಸದುರ್ಗ ಬೆಟ್ಟ, ಸಂಗಮ ಸುತ್ತಲಿನ ಬೆಟ್ಟಗಳಿಂದ ಕೂಡಿದ ಅರಣ್ಯ ಪ್ರದೇಶವನ್ನು ಹೊಂದಿದೆ. ಅರಣ್ಯದಲ್ಲಿ ಹಲವು ಬಗೆಯ ಮರಗಳು ಕಂಡುಬರುತ್ತವೆ. ಅವುಗಳೆಂದರೆ ತೇಗ, ಹೊನ್ನೆ, ಬೀಟೆ, ಬೇವು, ಹುಣಸೆ, ಶ್ರೀಗಂಧ, ನೇರಳೆ, ಅರಳಿ, ಮತ್ತಿ, ಆಲ, ಬನ್ನಿ. ನೀಲಗಿರಿ, ಬಾಗೆ ಇತ್ಯಾದಿ ಮರಗಳಿಂದ ಈ ಅರಣ್ಯಗಳು ಆವೃತ್ತವಾಗಿವೆ.

ಈ ತಾಲ್ಲೂಕಿನ ಅರಣ್ಯ ಪ್ರದೇಶದಲ್ಲಿ ಹಲವು ಪ್ರಾಣಿಗಳು ವಾಸವಾಗಿವೆ. ಆನೆ, ಚಿರತೆ, ಕರಡಿ ಕಾಡುಹಂದಿ, ತೋಳ, ನರಿ, ಜಿಂಕೆ, ಮೊಲ, ಮುಂಗುಸಿ, ಮುಳ್ಳಂದಿ, ಸಾರಂಗ ಮುಂತಾದ ಪ್ರಾಣಿಗಳು ಕಂಡುಬರುತ್ತವೆ. ಪಕ್ಷಿಗಳಲ್ಲಿ ಗೀಜಿಗ, ಕಾಡುಕೋಳಿ, ಹದ್ದು, ಕಾಗೆ, ಗಿಳಿ, ಕೊಕ್ಕರೆ, ಕೌಜುಗದ ಹಕ್ಕಿ, ನವಿಲು, ಕೋಗಿಲೆ, ರಣಹದ್ದು, ಸ್ವರಕ್ಕಿ, ಪಾರಿವಾಳ, ಗಿಡುಗ, ಗುಬ್ಬಚ್ಚಿ, ಹೀಗೆ ಹಲವು ಬಗೆಯ ಪಕ್ಷಿಗಳು ಕಂಡು ಬರುತ್ತದೆ. ಉಭಯವಾಸಿ ಜೀವಿಗಳಾದ ಹೆಬ್ಬಾವು, ನಾಗರಹಾವು, ಕೇರೆಹಾವು, ಮಂಡಲದಹಾವು, ಸುರಂಗಮಂಡಲ, ಹಸಿರುಹಾವು, ಎರಡು ತಲೆ ಹಾವು, ಕಾಳಿಂಗಸರ್ಪ, ಕೊಳಕಮಂಡಲ ಮುಂತಾದ ವಿಷಕಾರಿ ಹಾವುಗಳು ಈ ಕನಕಪುರ ತಾಲ್ಲೂಕಿನ ಸುತ್ತ ಅರಣ್ಯ ಪ್ರದೇಶದಲ್ಲಿವೆ.

ನದಿ, ಕೆರೆ, ಬಾವಿಗಳಲ್ಲಿ ಹಲವು ಜಾತಿಯ ಮೀನುಗಳಿವೆ. ಅವುಗಳಲ್ಲಿ ಪ್ರಮುಖವಾದ ಮೀನುಗಳೆಂದರೆ ಗೊದ್ದಲ, ಕಟ್ಲ, ರಘು, ಬಾಚಣಿಗೆ, ಆನೆಮೀನು, ಹಾವುಗತ್ತಿ, ಬಾಳೆಮೀನು, ಗಿರ್ಲು, ಸೊಸ್ಲು.ಕೊರಂಪಿಟ್ಟೆ, ಪಿಳ್ಳೆ, ಪೀಯ, ಸಿಲ್ವರ್ ಇತ್ಯಾದಿ ಮೀನುಗಳಿವೆ. ಹೀಗೆ ಹಲವಾರು ಪ್ರಭೇಧಗಳನ್ನು ಒಳಗೊಂಡಿರುವ ಈ ಪ್ರದೇಶದ ಅರಣ್ಯ ಪ್ರದೇಶದಲ್ಲಿ ನಿರಂತರವಾಗಿ ನಡೆಯುತ್ತಿರುವ ಗಣಿಗಾರಿಕೆಯಿಂದ ಅರಣ್ಯ ಪ್ರದೇಶ ನಾಶದ ಅಂಚಿನಲ್ಲಿದೆ.ಒಂದು ಕಡೆ ಗ್ರಾನೇಟ್‌ಗಾಗಿ ಅರಣ್ಯ ಹಾಳಾಗುತ್ತಿದ್ದರೆ ಮತ್ತೊಂದು ಕಡೆ ನಗರ ಪ್ರದೇಶ ಮತ್ತು ಹಳ್ಳಿಗಳು ಬೆಳೆಯುವುದರಿಂದ ಅರಣ್ಯ ಪ್ರದೇಶವನ್ನು ವ್ಯವಸಾಯಕ್ಕೆ ಮತ್ತು ಜನವಾಸಕ್ಕೆ ಬಳಸುವ ಮೂಲಕ ಅರಣ್ಯನಾಶವಾಗದಿರುವುದು ತಾಲ್ಲೂಕಿನಾದ್ಯಂತ ಕಂಡು ಬರುತ್ತದೆ.

**ತಾಲ್ಲೂಕಿನ ಪ್ರಮುಖ ಉದ್ಯೋಗ**

ಕನಕಪುರ ತಾಲ್ಲೂಕು ಹಲವು ಸಮುದಾಯ ಹಲವು ಸಂಸ್ಕೃತಿ ಹಲವು ಭಾಷಿಕರನ್ನು ಹೊಂದಿರು ವುದರಿಂದ ಉದ್ಯೋಗದಲ್ಲಿ ಕೂಡ ಬೇರೆ ಬೇರೆ ಕ್ಷೇತ್ರಗಳನ್ನು ಅವಲಂಬಿಸಿರುವುದು ಕಂಡು ಬರುತ್ತದೆ.ಯಾವುದೇ ಒಂದು ಪ್ರದೇಶ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಆ ಪ್ರದೇಶದ ಜನ ಸಮುದಾಯದ ಉದ್ಯೋಗದ ಮೇಲೆ ನಿರ್ಧರಿಸಲ್ಪಡುತ್ತದೆ. ಇಂತಹ ನಿರ್ಧರಿಸಲ್ಪಟ್ಟಿರುವ ಪ್ರಮುಖ ಉದ್ಯೋಗಗಳನ್ನು ಈ ಕೆಳಗಿನಂತೆ ಗ್ರಹಿಸಬಹುದಾಗಿದೆ

**ವ್ಯವಸಾಯ**

ಕನಕಪುರ ತಾಲ್ಲೂಕಿನ ಪ್ರಮುಖ ಉದ್ಯೋಗ ವ್ಯವಸಾಯವಾಗಿದೆ.ಸುಮಾರು 10 ಸಾವಿರದಿಂದ 15 ಸಾವಿರ ಹೆಕ್ಟೇರ್ ಪ್ರದೇಶದಲ್ಲಿ ಕೃಷಿ ಚಟುವಟಿಕೆ ನಡೆಯುತ್ತದೆ.ಈ

ಚಟುವಟಿಕೆಗಳಲ್ಲಿ ರಾಗಿ, ಭತ್ತ, ಅವರೆ, ಹುರುಳಿ, ಕಬ್ಬು, ತೆಂಗು, ತೊಗರಿ, ಎಳ್ಳು, ಕಡಲೆಕಾಳು, ಹರಳು, ಗೆಣಸು ಬೆಳೆಗಳನ್ನು ಬೆಳೆಯುತ್ತಾರೆ.ಇದರ ಜೊತೆಗೆ ತರಕಾರಿಗಳಾದ ಟಮೋಟೋ, ಬದನೆಕಾಯಿ, ಕ್ಯಾರೆಟ್, ಆಲೂಗಡ್ಡೆ, ಈರುಳ್ಳಿ, ಬೆಳ್ಳುಳ್ಳಿ, ಬೀನ್ಸ್, ಬೆಂಡೇಕಾಯಿ, ಸೋರೇಕಾಯಿ, ಅವರೆಕಾಯಿ ಜೊತೆಗೆ ಹಲವು ರೀತಿಯ ಸೊಪ್ಪುಗಳನ್ನು ಬೆಳೆಯುತ್ತಾರೆ. ಹಣ್ಣುಗಳಾದ ಬಾಳೆಹಣ್ಣು ಅದರಲ್ಲಿ ಪಚ್ಚ್‌ಬಾಳೆ, ಯಾಲಕ್ಕಿ ಬಾಳೆ, ಮಾವಿನ ಹಣ್ಣುಗಳಲ್ಲಿ ಬಾದಾಮಿ, ಸೇಂದುರ, ಬೈಗನ್‌ಪಲ್ಲಿ, ವಾಲಜ, ತೋತಾಪುರಿ, ನೀಲಂ, ಮಲಗೋಬಾ, ಮಲ್ಲಿಕ, ರಸಪುರಿ, ಸಕ್ಕರ್‌ಗುಡಲಿ ಮಾವುಗಳನ್ನು ಬೆಳೆಯುತ್ತಾರೆ. ಇತರೆ ಹಣ್ಣುಗಳಾದ ಸಪೋಟ, ದಾಳಿಂಬೆ, ನೇರಳೆ, ಚಿಪೇಕಾಯಿ ಬೆಳೆಗಳನ್ನು ಬೆಳೆಯುತ್ತಾರೆ.

ಕನಕಪುರ ತಾಲ್ಲೂಕಿನಲ್ಲಿ ಶೇ 70 ರಿಂದ 75ರಷ್ಟು ರೈತರು ರೇಷ್ಮೆ ಬೆಳೆಯನ್ನು ಬೆಳೆಯುತ್ತಾರೆ.ಇದರಿಂದ ಉತ್ತಮವಾದ ಆದಾಯವನ್ನು ಪಡೆಯುತ್ತಿದ್ದರು.ಇತ್ತೀಚಿನ ದಿನಗಳಲ್ಲಿ ರೇಷ್ಮೆಗೂಡಿನ ಬೆಲೆ ಕಡಿಮೆಯಾಗಿರುವುದರಿಂದ ರೈತರು ಸಂಕಷ್ಟಕ್ಕೆ ಸಿಲುಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ತಾಲ್ಲೂಕಿನಲ್ಲಿ ಕಂಡುಬಂದಿದೆ.ಒಂದು ಕಾಲದಲ್ಲಿ ಈ ತಾಲ್ಲೂಕಿನ ಜನರು ವಲಸೆ ಹೋಗುವುದನ್ನು ತಪ್ಪಿಸಿದ ರೇಷ್ಮೆ ಬೆಳೆ ವಾಸ್ತವದಲ್ಲಿ ವಲಸೆ ಹೋಗುವ ಸಂದರ್ಭವನ್ನು ಎದುರಿಸುತ್ತಿದ್ದಾರೆ.

**ರೇಷ್ಮೆ ಬೆಳೆ**

ಕನಕಪುರ ತಾಲ್ಲೂಕಿನ ಜನತೆಯ ಪ್ರಮುಖ ಬೆಳೆ ಎಂದರೆ ಹಿಪ್ಪುನೇರಳೆ ಸೊಪ್ಪಿನಿಂದ ರೇಷ್ಮೆ ಬೆಳೆಯುವುದು ಈ ಉದ್ಯೋಗದಿಂದ ತಾಲ್ಲೂಕಿನ ಶೇ75 ರಿಂದ 80 ರಷ್ಟು ಜನರ ಜೀವನ ಸಾಗುತ್ತಿದೆ.

ರೇಷ್ಮೆ ಬೆಳೆಯುವುದು ಹೆಚ್ಚಿದಂತೆಲ್ಲಾ ರೇಷ್ಮೆ ಬೆಳೆಯಲು ಬೇಕಾಗುವ ಕಚ್ಚಾ ಸಾಮಾಗ್ರಿಗಳ ಬೇಡಿಕೆ ಹೆಚ್ಚಾಗಿ ಕಚ್ಚಾ ವಸ್ತುಗಳ ತಯಾರಿಕರಿಗೂ ಉದ್ಯೋಗ ಲಭಿಸುತ್ತಿದೆ.ಹೀಗೆ ರೇಷ್ಮೆ ಬೆಳೆ ಉತ್ತಮ ಆದಾಯವನ್ನು ತರುವ ಬೆಳೆಯಾಗಿತ್ತು ಆದರೆ ಇತ್ತೀಚಿನ ದಿನಗಳಲ್ಲಿ ಇದರ ಬೆಲೆಯಲ್ಲಿ ಕುಸಿತ ಉಂಟಾಗಿ ರೇಷ್ಮೆ ಬೆಳೆಯುತ್ತಿರುವ ರೈತರು ಸಂಕಷ್ಟದಲ್ಲಿ ಮುಳುಗಿದ್ದಾರೆ.

ಕನಕಪುರ ತಾಲ್ಲೂಕಿನ 6 ಹೋಬಳಿಗಳಲ್ಲಿಯೂ ರೇಷ್ಮೆ ಬೆಳೆಯುತ್ತಾರೆ.ಇದರಲ್ಲಿ ಕಸಬಾ ಹೋಬಳಿಯು ಕನಕಪುರ ನಗರ ಸಭೆಗೆ ಸೇರುವುದರಿಂದ ಕಸಬಾ ಹೋಬಳಿಯಲ್ಲಿ ಕಡಿಮೆ ಪ್ರಮಾಣದಲ್ಲಿ ರೇಷ್ಮೆ ಬೆಳೆಯುತ್ತಾರೆ.ಆದರೆ ರೇಷ್ಮೆ ನೂಲು ತೆಗೆಯುವ ಕಾರ್ಖಾನೆಗಳು ಹೆಚ್ಚಾಗಿ

ಈ ಹೋಬಳಿಯಲ್ಲಿ ಕಂಡು ಬರುತ್ತವೆ. ಬೆಳೆದ ರೇಷ್ಮೆಯನ್ನು ಮಾರಾಟ ಮಾಡಲು ಕನಕಪುರದಲ್ಲಿ ಉತ್ತಮ ರೀತಿಯ ರೇಷ್ಮೆಗೂಡು ಮಾರುಕಟ್ಟೆ ಇದೆ.ಇದರಿಂದ ಹೊರ ತಾಲ್ಲೂಕು ಅಥವಾ ಹೊರ ಜಿಲ್ಲೆಗೆ ಹೋಗುವ ಅವಶ್ಯಕತೆ ಇಲ್ಲ. ಈ ಮಾರುಕಟ್ಟೆಯಲ್ಲಿ ಖರೀದಿಸುವ ರೇಷ್ಮೆಗೂಡನ್ನು ನೂಲು, ಫಿಲೇಚರ್, ಕೈರಾಟೆ, ಕಾಟೇಜ್ ಬೇಸ್‌ನ್‌ಗಳಿಂದ ಸುಮಾರು 5 ಸಾವಿರ ಜನರಿಗೆ ಉದ್ಯೋಗ ದೊರೆತಿದೆ.ಈ ತಾಲ್ಲೂಕಿನಲ್ಲಿ ರೇಷ್ಮೆ ಬಿತ್ತನೆಯನ್ನು ಸರಬರಾಜು ಮಾಡಲು ಸರ್ಕಾರಿ ಮತ್ತು ಖಾಸಗಿ ಬಿತ್ತನೆ ಕೇಂದ್ರಗಳು ತಾಲ್ಲೂಕಿನಲ್ಲಿವೆ. ಆದರೆ ರೇಷ್ಮೆ ಬೆಳೆಗಾರರು ರೇಷ್ಮೆ ಮೊಟ್ಟೆಗಳನ್ನು ತೆಗೆದುಕೊಳ್ಳುವುದಿಲ್ಲ. ಅದರ ಬದಲು ಚಾಕಿ ಸಾಗಾಣಿಕೆ ಕೇಂದ್ರಗಳಿಂದ ಜ್ವರದಿಂದ ಎದ್ದಿರುವ ಮತ್ತು ಜ್ವರಕ್ಕೆ ಬಿದ್ದಿರುವ ಹುಳುಗಳನ್ನು ತೆಗೆದುಕೊಂಡು ಬರುತ್ತಾರೆ.ಈ ಕಾರಣದಿಂದ ಚಾಕಿ ಸಾಗಾಣಿಕೆ ಕೇಂದ್ರಗಳು ಸ್ಥಾಪಿತವಾಗಿವೆ. ಇವುಗಳಲ್ಲಿ ತಾಲ್ಲೂಕಿನ ಕೀರಣಗೆರೆಯ ಚಾಕಿ ಸಾಗಾಣಿಕೆ ತಾಲ್ಲೂಕಿನಾದ್ಯಂತ ಒಳ್ಳೆಯ ಚಾಕಿ ಸಾಗಾಣಿಕೆ ಕೇಂದ್ರವೆಂದು ಹೆಸರು ಪಡೆದಿದೆ.ಇದರಿಂದ ಅಕ್ಕ-ಪಕ್ಕದ ತಾಲ್ಲೂಕಿನ ಮತ್ತು ಜಿಲ್ಲೆಯ ರೈತರು ಕೂಡ ಈ ಕೇಂದ್ರದಲ್ಲಿ ಚಾಕಿಯನ್ನು ಖರೀದಿಸುತ್ತಾರೆ.ಇನ್ನು ಉಳಿದ ಚಾಕಿ ಕೇಂದ್ರ, ಕೆರಳಾಳುಸಂದ್ರದ ನಾರಾಯಣಗೌಡ ಚಾಕಿ ಸಾಗಾಣಿಕೆ ಕೇಂದ್ರಗಳು ಪ್ರಮುಖವಾಗಿವೆ. ಹಾಗೆಯೇ ರೇಷ್ಮೆ ಬೆಳೆಗಳಿಗೆ ಬರುವಂತಹ ಹಲವು ರೀತಿಯ ರೋಗಗಳನ್ನು ತಡೆಗಟ್ಟುವ ಮಾಹಿತಿ ಮತ್ತು ಔಧಗಳೊಡನೆ ಸಲಹೆ ಔಷಧ ಸೂಚನೆಗಳೊಂದಿಗೆ ಸಹಾಯಧನ ಒದಗಿಸುವ ಸರ್ಕಾರಿ ಕೃಷಿ ಇಲಾಖೆ ತಾಲ್ಲೂಕಿನಲ್ಲಿ ಕಾರ್ಯ ನಿರ್ವಹಿಸುವುದರಿಂದ ರೈತರಿಗೆ ಉತ್ತಮ ರೀತಿಯ ಔಷಧಿಗಳು ಮತ್ತು ಸರ್ಕಾರದಿಂದ ದೊರೆಯುವ ಸೌಲಭ್ಯಗಳನ್ನು ಪಡೆಯಲು ಸಹಕಾರಿಯಾಗಿದೆ.

**ಹೈನುಗಾರಿಕೆ**

ಕನಕಪುರ ತಾಲ್ಲೂಕಿನ ಜನತೆ ವ್ಯವಸಾಯದ ಜೊತೆಗೆ ಪೂರಕವಾದ ಉದ್ಯೋಗವಾದ ಹೈನುಗಾರಿಕೆಯನ್ನು ಅವಲಂಬಿಸಿದ್ದಾರೆ.ಮೀನು ಸಾಗಾಣಿಕೆಯಿಂದ ಉತ್ತಮ ಲಾಭವನ್ನು ಪಡೆಯುತ್ತಿರುವುದು ತಾಲ್ಲೂಕಿನಲ್ಲಿ ಕಂಡು ಬರುತ್ತದೆ.

ಈ ತಾಲ್ಲೂಕಿನ ಮತ್ತೊಂದು ಪ್ರಮುಖವಾದ ಕಸುಬು ಹೈನುಗಾರಿಕೆ ಒಂದು, ಹಸು ಒಂದು ಕುಟುಂಬದ ಜೀವನವನ್ನು ನಡೆಸಲು ಸಹಕಾರಿಯಾಗಿದೆ.ಮೊದಲು ಸ್ಥಳೀಯ ಹಸುಗಳಿದ್ದವು.ಅವು ಒಂದು ದಿನಕ್ಕೆ ಎರಡರಿಂದ ನಾಲ್ಕು ಲೀಟರ್ ಹಾಲು ಕೊಡುತ್ತಿದ್ದವು.ಆದರೆ ವಾಸ್ತವದಲ್ಲಿ ಸೀಮೆ ಹಸುಗಳು (ವಿದೇಶಿ ತಳಿ) ಹಸುಗಳು ಒಂದು ದಿನಕ್ಕೆ ಒಂದು ಹಸು 15 ರಿಂದ 25 ಲೀಟರ್ ಹಾಲನ್ನು ಕೊಡುತ್ತದೆ.ಈ ಹಾಲನ್ನು ಡೈರಿಗಳ ಮೂಲಕ ಸರಬರಾಜು

ಮಾಡಲಾಗಹುತ್ತದೆ.ಈ ಹಸುಗಳ ಜೊತೆಗೆ ಮಾಂಸ ಹಾಗೂ ವ್ಯವಸಾಯಕ್ಕೆ ಉಪಯುಕ್ತವಾಗಿರುವ ಹಸು, ಎಮ್ಮೆ, ಮೇಕೆ, ನಾಟಿ ಕೋಳಿ, ಕುರಿ, ಹಂದಿ, ಮೊಲ, ಏಮುಕೋಳಿ, ಬೈಲರ್ ಕೋಳಿ, ಮೊಟ್ಟೆಕೋಳಿ ಮುಂತಾದ ಪ್ರಾಣಿಗಳನ್ನು ಹಾಗೂ ಪಕ್ಷಿಗಳನ್ನು ಸಾಕುವುದರ ಮೂಲಕ ವ್ಯವಸಾಯದ ಜೊತೆಗೆ ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸುತ್ತಿರುವುದು. ಹೈನುಗಾರಿಕೆಯು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

**ಸಾರಿಗೆ ಸಂಪರ್ಕ**

ಮೈಸೂರು, ಬೆಂಗಳೂರು ನಡುವೆ ಸಂಪರ್ಕ ಹೊಂದಿರುವ ರಾ.ಹೆ.209ರ ಹೆದ್ದಾರಿ ಕನಕಪುರ ನಗರದ ಮಧ್ಯಭಾಗದಲ್ಲಿ ಹಾದು ಹೋಗುತ್ತದೆ. ಈ ರಸ್ತೆಯಲ್ಲಿ ಬೆಳಿಗ್ಗೆ 4.00 ಗಂಟೆಯಿಂದ ಪ್ರಾರಂಭವಾದ ವಾಹನ ಸಂಚಾರ ರಾತ್ರಿ 12 ಗಂಟೆಯವರಗೆ ಇರುತ್ತದೆ.ನಂತರ ಖಾಸಗೀ ವಾಹನಗಳು ಹೇರಳವಾಗಿ ಚಲಿಸುತ್ತವೆ. ಕನಕಪುರ ತಾಲ್ಲೂಕು, ರಾಮನಗರ, ಚನ್ನಪಟ್ಟಣ, ಆನೇಕಲ್ಲು, ತಮಿಳುನಾಡು, ಕೊಳ್ಳೇಗಾಲ, ಹಲಗೂರು, ಮಳ್ಳವಳ್ಳಿ.ಮೈಸೂರು, ಮಂಡ್ಯ, ಮದ್ದೂರು, ಹಾರೋಹಳ್ಳಿ, ಬೆಂಗಳೂರು ಹಾಗೂ ಶಿವನಸಮುದ್ರ,ತಲಕಾಡು, ಅಚ್ಚಲು, ಕಬ್ಬಾಳುದುರ್ಗ, ರೇವಣ್ಣ ಸಿದ್ದೇಶ್ವರ ಬೆಟ್ಟ, ಸಂಗಮ, ಮೇಕೆದಾಟುಗಳಂತಹ ಐತಿಹಾಸಿಕ ಪ್ರವಾಸಿ ತಾಣಗಳಿಗೆ ಸಾರಿಗೆ ಸಂಪರ್ಕ ಹೊಂದಿದೆ. ಈ ತಾಲ್ಲೂಕಿನಲ್ಲಿ ಅಂಚೆ ವ್ಯವಸ್ಥೆ ಉತ್ತಮವಾಗಿದೆ.ಆದರೆ 21ನೇ ಶತಮಾನದಲ್ಲಿದ್ದರು ಕನಕಪುರ ತಾಲ್ಲೂಕಿನ ಕೆಲವು ಹಳ್ಳಿಗಳಿಗೆ ಇನ್ನು ಕೂಡ ರಸ್ತೆ ಸಂಪರ್ಕವಾಗಿಲ್ಲ. ಸಾರಿಗೆ ಸಂಪರ್ಕವಿಲ್ಲದೆ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವ ಹಳ್ಳಿಗಳು ನದಿಯ ದಂಡೆಗಳಲ್ಲಿ ಇರುವ ಹಳ್ಳಿಗಳು ಸಾರಿಗೆ ಸಂಪರ್ಕ ಇಲ್ಲದೇ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದು.ಕಂಡುಬರುತ್ತದೆ.

ಮಳೆಗಾಲದಲ್ಲಿ ಮಳೆಯ ನೀರಿನಿಂದ ನದಿಗಳು ತುಂಬಿ ಹರಿಯುವಾಗ ಹಳ್ಳಿಗಳ ಸಂಪರ್ಕ ಕಡಿದು ಹೋಗಿ ಆ ಹಳ್ಳಿಯ ಜನರು ಸಂಕಷ್ಟವನ್ನು ಅನುಭವಿಸುತ್ತಾರೆ. ಇದಕ್ಕೆ ಉತ್ತರದಂತ್ತಿರುವ ಕನಕಪುರದಿಂದ ರಾಮನಗರ ಜಿಲ್ಲೆಗೆ ಹೆದ್ದಾರಿಯಾಗಿರುವ ರಸ್ತೆಯ ಬಲದಂಡೆಯ ಮೇಲೆ ಇರುವಂತಹ ಕುಂತಿಕಲ್‌ದೊಡ್ಡಿಗೆ ಸಾರಿಗೆ ಸಂಪರ್ಕವಿಲ್ಲ. ಈ ದೊಡ್ಡಿ ಕನಕಪುರದಿಂದ ಕೇವಲ 6.ಕಿ.ಮೀ ದೂರದಲ್ಲಿದೆ. ಜಿಲ್ಲೆಯಿಂದ 21ಕಿ.ಮೀ ದೂರದಲ್ಲಿರುವುದು ಗಮನಾರ್ಹವಾಗಿದೆ.ಹೀಗೆ ಈ ದೊಡ್ಡಿಗೆ ಸಾರಿಗೆ ಸಂಪರ್ಕ ಕಲ್ಪಿಸಲಾಗದಿರುವುದು ಸಾರಿಗೆ ವ್ಯವಸ್ಥೆ ಮತ್ತು ಕ್ಷೇತ್ರದ ಜನಪ್ರತಿನಿಧಿಗಳಿಗೆ ಒಂದು ಕಪ್ಪು ಚುಕ್ಕಿಯಾಗಿದೆ.

### ಕನಕಪುರ ತಾಲ್ಲೂಕಿನ ಪ್ರಮುಖ ಬೆಟ್ಟಗಳು

ಕನಕಪುರ ತಾಲ್ಲೂಕು, ಕಲ್ಲುಮಣ್ಣಿನಿಂದ ಕೂಡಿರುವ ಪ್ರದೇಶವಾಗಿದೆ.ಈ ತಾಲ್ಲೂಕು ಅನೇಕ ಸುಂದರವಾದ ಹಾಗೂ ಪ್ರವಾಸಿ ತಾಣ ಬೆಟ್ಟಗಳಿಂದ ಕೂಡಿದೆ. ಇವು ಐತಿಹಾಸಿಕ ಹಿನ್ನೆಲೆಯನ್ನು ಸಹ ಹೊಂದಿರುವ ಬೆಟ್ಟಗಳಾಗಿವೆ. ಇತಿಹಾಸದಲ್ಲಿ ನಡೆದಿರುವ ಅನೇಕ ಐತಿಹಾಸಿಕ ಘಟನೆಗಳಲ್ಲಿ ರಾಮಸೀತೆಯವರ ಇತಿಹಾಸ ಪ್ರಮುಖವಾದುದ್ದು. ಇವರು ಕನಕಪುರ ತಾಲ್ಲೂಕಿನ ಹೊಸದುರ್ಗದ ರಾಮದೇವರ ಬೆಟ್ಟಗಳಲ್ಲಿ ವನವಾಸದ ಸಂದರ್ಭದಲ್ಲಿ ಇಲ್ಲಿ ಬಂದು ನೆಲೆ ನಿಂತು ಹೋಗಿದ್ದರು.ಎಂದು ಅನೇಕ ಕುರುಹುಗಳನ್ನೊಳಗೊಂಡ ಬೆಟ್ಟವಾಗಿದೆ. ಅದೇ ರೀತಿಯ ಪ್ರಮುಖ ಬೆಟ್ಟಗಳೆಂದರೆ ಕಬ್ಬಾಳು ಬೆಟ್ಟ, ನಿಡಗಲ್ಲು ಬೆಟ್ಟ, ಬಿಳಿಕಲ್‌ಬೆಟ್ಟ, ಬೆಟ್ಟಹಳ್ಳಿ ಬೆಟ್ಟ ಸುಂಡಘಟ್ಟಬೆಟ್ಟ ಹೀಗೆ ತಾಲ್ಲೂಕಿನಾದ್ಯಂತ ಐತಿಹಾಸಿಕ ಹಿನ್ನೆಲೆ ಮತ್ತು ಪುರಾಣಕ್ಕೆ ಪ್ರಸಿದ್ಧವಾದ ಬೆಟ್ಟಗಳು ಈ ತಾಲ್ಲೂಕಿನಲ್ಲಿ ಕಂಡು ಬರುತ್ತವೆ.

### ಕನಕಪುರ ತಾಲ್ಲೂಕಿನಲ್ಲಿರುವ ಪ್ರೇಕ್ಷಣೀಯ ಸ್ಥಳಗಳು

ಕನಕಪುರ ತಾಲ್ಲೂಕಿನಲ್ಲಿ ಐತಿಹಾಸಿಕ ಹಿನ್ನೆಲೆಯನ್ನು ಒಳಗೊಂಡ ಪ್ರೇಕ್ಷಣೀಯ ಸ್ಥಳಗಳಿವೆ. ಅವುಗಳ ವಿವರ ಹೀಗಿದೆ.

| **ಊರು** | | **ಪ್ರವಾಸಿ ತಾಣ** |
|---|---|---|
| ಸಂಗಮ | – | ಸಂಗಮ |
| ಸಂಗಮ | – | ಮೇಕೆದಾಟು |
| ಸಂಗಮ | – | ಮಡಿವಾಳ |
| ಸಂಗಮ | – | ಕಾವೇರಿ ಫಿಶಿಂಗ್ ಕ್ಯಾಂಪ್ |
| ಸುಂಡಘಟ್ಟ | – | ಬಿಳಿಕಲ್‌ಬೆಟ್ಟ |
| ಚುಂಚಿ | – | ಚುಂಚಿಫಾಲ್ಸ್ (ಚುಂಚಿಜಲಪಾತ) |
| ಹಾರೋಬೆಲೆ | – | ಹಾರೋಬೆಲೆ ಡ್ಯಾಂ |
| ಅಚ್ಚಲು | – | ಅಚ್ಚಲು ದುರ್ಗ |
| ಕಬ್ಬಾಳು | – | ಕಬ್ಬಾಳು ದುರ್ಗ |
| ಶಿವಾಲದಪ್ಪನ ಬೆಟ್ಟ | – | ಶಿವಾಲದಪ್ಪನ ಬೆಟ್ಟ |
| ಮರಳೇ | – | ಮರಳೇಗವಿಮಠ |
| ಕಲ್ಲಹಳ್ಳಿ | – | ಚಿಕ್ಕತಿರುಪತಿ |
| ಮಾವತೂರು | – | ಮಾವತೂರುಕೆರೆ |
| ಮುತ್ತತ್ತಿ | – | ಮುತತ್ತರಾಯ |

**ಕನಕಪುರ ತಾಲ್ಲೂಕಿನ ಪ್ರೇಕ್ಷಣೀಯ ದೇವಸ್ಥಾನಗಳು**

ಕನಕಪುರ ತಾಲ್ಲೂಕಿಗೆ ಭೌಗೋಳಿಕ ಪ್ರದೇಶಕ್ಕೆ ಪ್ರಮುಖ ಸ್ಥಾನವನ್ನು ಕೊಡುವಂತಹುಗಳು, ಧಾರ್ಮಿಕ ಆಚರಣೆಗಳನ್ನು ಒಳಗೊಂಡಿರುವ ಕೇಂದ್ರಗಳು ಮತ್ತು ದೇವಾಲಯಗಳು ಹಾಗೆ ಪ್ರಸಿದ್ಧಿಯನ್ನು ಪಡೆದಿರುವ ದೇವಾಲಯಗಳ ಪಟ್ಟಿಯನ್ನು ನೀಡಲಾಗಿದೆ.

| **ಊರು** | | **ದೇವಾಲಯಗಳು** |
|---|---|---|
| ಕನಕಪುರ | – | ಕಾಳಿಕಾಂಬ, ಕೆಂಕೇರಮ್ಮ, ಚಾಮುಂಡೇಶ್ವರಿ, ಕೋಟೆ ಆಂಜನೇಯ, ರಾಘವೇಂದ್ರ ಸ್ವಾಮಿ, ಅಯ್ಯಪ್ಪಸ್ವಾಮಿ |
| ಶಿವನಹಳ್ಳಿ | – | ವೀರಭದ್ರಸ್ವಾಮಿ |
| ದಬ್‌ಗೂಳಿ | – | ದಬ್‌ಗೂಳೇಶ್ವರ |
| ಮುತ್ತತ್ತಿ | – | ಮುತ್ತತ್ತರಾಯ |
| ಹೊಸದುರ್ಗ | – | ರಾಮಮಂದಿರ |
| ಕಲ್ಲಹಳ್ಳಿ | – | ವೆಂಕಟರಮಣಸ್ವಾಮಿ (ಚಿಕ್ಕತಿರುಪತಿ) |

# ರಾಮನಗರ ಜಿಲ್ಲೆ




* ಅಧ್ಯಾಯ –2 ರ ಕೆಲವು ಮಾಹಿತಿಗಳನ್ನು ಇವುಗಳಿಂದ ಪಡೆಯಲಾಗಿದೆ.
* ಕರ್ನಾಟಕದ ಜನಗಣತಿ–2011– ಡಾಖಟಿ.ಆರ್.ಚಂದ್ರಶೇಖರ್–2011. ಪ್ರಸಾರಾಂಗ–ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಸಾಮಾಜಿಕ–ಆರ್ಥಿಕ ಅವಲೋಕನ2011–12, ರಾಮನಗರ ಜಿಲ್ಲಾಸಂಖ್ಯಾಸಂಗ್ರಹಣಾಧಿಕಾರಿಗಳು, ರಾಮನಗರ.

# ಅಧ್ಯಾಯ –3

**ಕನಕಪುರ ತಾಲ್ಲೂಕಿನ ದರ್ಗಾಗಳು**

ಭಾರತದ ದೇಶದಲ್ಲಿ ಅನೇಕ ಭಾಷಿಕರು ನೆಲೆ ನಿಂತಿದ್ದು, ಅವರುಗಳ ಜೀವನದ ಶೈಲಿ ಬೇರೆ ಬೇರೆಯಾಗಿದ್ದರು.ಏಕತೆಯನ್ನು ಸಾರುವಂತಹ ಜಾನಪದೀಯ ಆಚರಣೆಗಳು ಭಾರತಾದ್ಯಂತ ಕಂಡುಬಂದಿರುವುದು ಗಮನಾರ್ಹವಾಗಿದೆ.ಭಾರತ ದೇಶದ ಸಂಸ್ಕೃತಿಯನ್ನು ಒಂದು ವಾಕ್ಯದಲ್ಲಿ ಹೇಳಲು ಕಷ್ಟ ಸಾಧ್ಯವಾಗಿದೆ.ಅನೇಕ ಬರಹಗಾರರು, ಲೇಖಕರು, ಸಂಶೋಧಕರು, ವಿದ್ಯಾವಂತರು ತಮ್ಮದೇ ಆದಂತಹ ಹೇಳಿಕೆಗಳನ್ನು ತಮ್ಮ ಜೀವನ ಶೈಲಿಯನ್ನು ಅನುಸರಿಸಿ ಹೇಳಿದ್ದರು.ಪೂರ್ಣ ಪ್ರಮಾಣದ ಅರ್ಥ ಕಂಡುಕೊಳ್ಳಲು ಇನ್ನು ಚಿಂತನೆಗಳು ನಡೆಯುತ್ತಲೇ ಇವೆ. ಇಂತಹ ಸಂದರ್ಭದಲ್ಲಿ ಮುಸ್ಲಿಂ ಮತ್ತು ಹಿಂದುಗಳಿಬ್ಬರು ಒಡಗೂಡಿ ಉಳಿಸಿಕೊಂಡು ಬಂದಿರುವ ನಂಬಿಕೆಗಳು ಭಾರತಾದ್ಯಂತ ಕಂಡುಬರುತ್ತವೆ. ಇಂತಹ ನಂಬಿಕೆಗಳಲ್ಲಿ ದರ್ಗಾಗಳ ನಂಬಿಕೆಯು ಒಂದಾಗಿದ್ದ.ಹಿಂದೂ ಸಂಸ್ಕೃತಿಯೊಡನೆ ಪ್ರತಿನಿತ್ಯ ಸಂಮಿಲನವಾಗುವ ಮುಸ್ಲಿಂ ಸಮುದಾಯ ಹಿಂದೂ ಸಂಸ್ಕೃತಿಯ ಪ್ರಭಾವಗಳಿಂದ ದರ್ಗಾಗಳ ಮತ್ತು ದರ್ಗಾಗಳಲ್ಲಿ ಉರುಸ್ (ಉತ್ಸವ) ಆಚರಿಸುವುದು ಪ್ರಮುಖವಾಗಿದೆ.

ಕರ್ನಾಟಕದ ಬಹುತೇಕ ನಗರ, ಪಟ್ಟಣ, ಗ್ರಾಮ, ಹಳ್ಳಿ, ದೊಡ್ಡಿಗಳಲ್ಲಿ ಗೋರಿಗಳಿವೆ. ಇಂತಹ ಗೋರಿಗಳನ್ನು ದರ್ಗಾಗಳಾಗಿ ಅವುಗಳನ್ನು ವೈಭವೀಕರಿಸುವುದರ ಮೂಲಕ ಸತ್ಯವಂತ ವಲೀಗಳು ಸಾವನ್ನಪ್ಪಿದರೂ ಸಹ ಅವರ ಆತ್ಮ ನಮ್ಮೊಂದಿಗಿರುತ್ತದೆ.ಇವರ ಸಾವು ದೇಹಕ್ಕೆ ಮಾತ್ರ ಆತ್ಮಕಲ್ಲ. ಎಂಬ ದೃಢವಾದ ನಂಬಿಕೆಗಳ ಫಲವೇ ದರ್ಗಾಗಳು.ದರ್ಗಾದಲ್ಲಿ ಇರುವ 'ವಲೀಗಳು "ಅಲ್ಲಾನ ಮಿತ್ರ" ಎಂದು ಜನಪದರು ನಂಬಿದ್ದಾರೆ. ಈ ನಂಬಿಕೆಯಿಂದ "ವಲೀ" ಯವರ ಮೂಲಕ "ಅಲ್ಲಾ" ನಮ್ಮ ಬೇಡಿಕೆಗಳನ್ನು, ಕಷ್ಟಗಳನ್ನು, ಸಮಸ್ಯೆಗಳನ್ನು ಬಗೆಹರಿಸಲು 'ವಲಿ'ಯವರನ್ನು ಈ ಭೂಮಿಯ ಮೇಲೆ ಕಳುಹಿಸಿಕೊಟ್ಟಿದ್ದಾನೆ. ಎಂದು ಜನಪದ ಸಂಸ್ಕೃತಿಯಲ್ಲಿ ನಂಬಲಾಗಿದೆ.

ಅರಬ್ ರಾಷ್ಟ್ರಗಳಿಂದ ಸೂಫಿ ಸಂತರು ಇಸ್ಲಾಂ ಧರ್ಮವನ್ನು ಪ್ರಚಾರ ಮಾಡಲು ಇಡೀ ಪ್ರಪಂಚದ ಮೂಲೆ–ಮೂಲೆಗೂ ಹೊರಟಾಗ ನಮ್ಮ ಭಾರತಕ್ಕೂ ಇವರ ಪ್ರವೇಶವಾಯಿತು.ಇವರು ಭಾರತಕ್ಕೆ ಬಂದು ಯಾವುದೇ ರೀತಿಯ ರಾಜಕೀಯಕ್ಕೆ ಅಥವಾ ವ್ಯಾಪಾರಕ್ಕೆ ತಮ್ಮನ್ನು ತೊಡಗಿಸಿಕೊಳ್ಳದೇ ಧರ್ಮ ಪ್ರಚಾರದಲ್ಲಿ ತೊಡಗಿದರು. ಧರ್ಮ ಪ್ರಚಾರದಲ್ಲಿ ಬಹುಮಂದಿ ಅನ್ಯಧರ್ಮದವರು ಭಾರತದಲ್ಲಿ ನೆಲೆ ನಿಂತಿದ್ದರಿಂದಲೇ ಈ ಸಂತರು ಹಿಂದೂ, ಮುಸ್ಲಿಂ ಎಂಬ

ಭೇದವಿಲ್ಲದೆ ಎಲ್ಲರಲ್ಲಿಯೂ ಸಮಾನ ಅಂತರವನ್ನು ಕಾಪಾಡಿಕೊಳ್ಳುವ ಮೂಲಕ ಜನ ಸಾಮಾನ್ಯರಲ್ಲಿ ಸಾಮಾನ್ಯರಾಗಿ "ಅಲ್ಲಾನ ಭಕ್ತಿಯಲ್ಲಿ ಪರವಶರಾಗಿ ಲೌಕಿಕ ಸಂತೋಷವನ್ನ ಮೆರೆದು ಸಾಧನೆ ಹಾದಿಯಿಂದ ಅನೇಕ ಶಕ್ತಿಗಳನ್ನು ತಮ್ಮದಾಗಿಸಿಕೊಂಡು ಹಲವು ಪವಾಡಗಳನ್ನು ತೋರಿಸುವ ಜೊತೆಗೆ ಜನರ ಕಷ್ಟಗಳನ್ನು ಬಗೆಹರಿಸುವಲ್ಲಿ ಸಹಕರಿಸಿ ಜನಸಾಮಾನ್ಯರ ಸಮಸ್ಯೆಗಳಿಗೆ ಪರಿಹಾರಕೊಡುವ ಮೂಲಕ ಜನರ ಹತ್ತಿರವಾಗಿ ಜನರ ಭಕ್ತಿಗೆ ಪಾತ್ರರಾದರು. ಜನಸಾಮಾನ್ಯರ ಪ್ರಕಾರ ಯಾರು ತನ್ನ ಕಷ್ಟಗಳನ್ನು ನಿವಾರಿಸುತ್ತಾನೋ "ಅವನೇ ದೇವರ ಪ್ರತೀಕ". ಅವನನ್ನು ನಂಬಿ "ಪೂಜೆ" ಉತ್ಸವ ಆರಾಧನೆಯಲ್ಲಿ ತೊಡಗುವುದು.ಭಾರತದೇಶದ ಸಂಸ್ಕೃತಿಯಲ್ಲಿ ಕಂಡುಬರುವ ಒಂದು ಪ್ರಮುಖ ಸಂಗತಿಯಾಗಿದೆ.ಪೂಜನೀಯ ಭಾವನೆಯಿಂದ ನೋಡುವುದು ಭಾರತೀಯ ಗುಣ. ವಲೀ ಅವರನ್ನು "ಅಲ್ಲಾವಲೀ: ಎಂದು ಆರಾಧಿಸುವ ಮೂಲಕ ಅನೇಕರು ಅವರ ಶಿಷ್ಯರಾದರು. ಮುಂದೆ ಫೀರ್ ಮುರೀದ್ (ಗುರುಶಿಷ್ಯ) ಎಂಬ ಪರಂಪರೆ ಬೆಳೆದು ಬಂದಿದೆ.ಭಾರತ ದೇಶಕ್ಕೆ ಬಂದ ಈ ಸೂಫಿ ಸಂತರು ಮಹಮ್ಮದ್ ಪೈಗಂಬರ ಶಿಷ್ಯರಾದರು.ಅವರ ತತ್ವಗಳನ್ನು, ಆದರ್ಶಗಳನ್ನು ಬೇರೆ-ಬೇರೆ ದೇಶಗಳಲ್ಲಿ ಹರಡಲು ಬಂದವರು ಎಂದು ಮುಸ್ಲಿಂ ಜನಪದರು ನಂಬಿದ್ದಾರೆ.ಹೀಗೆ ಬಂದ "ವಲೀ"ಗಳು ಅನೇಕ ಸ್ಥಳಗಳಲ್ಲಿ ಸಂಚರಿಸಿ ಜೀವಂತ ಮಡಿದರು. ದುಷ್ಟ ಶಕ್ತಿಯೊಂದಿಗೆ ಹೋರಾಟ ಮಾಡಿ ಮಡಿದ "ವಲೀ'ಗಳು ಭಾರತದ್ಯಾಂತ ನೆಲೆಸಿರುವುದು ಐತಿಹ್ಯಗಳಿಂದ ತಿಳಿದು ಬರುತ್ತದೆ.

ಇಂತಹ 'ವಲೀ"ಗಳ ಬಗ್ಗೆ ಒಂದೊಂದು ಐತಿಹ್ಯಗಳು, ದಂತಕಥೆಗಳು ಹಲವು ನಂಬಿಕೆಗಳು ಕುರುಹುಗಳು ಕಂಡುಬಂದಿರುವುದರಿಂದ "ವಲೀ"ಯವರ ಮೇಲೆ ಇರುವ ಅನೇಕ ಕಥೆಗಳು ಐತಿಹ್ಯಗಳನ್ನು ಜನಪದರು ನಂಬಿದ್ದಾರೆ."ವಲೀ"ಗಳ ಹೆಸರಿನ ಮೇಲೆ ಹರಕೆ ಮಾಡಿಕೊಂಡು ಅವರನ್ನು ನೆನೆಯುವುದರಿಂದ ಸಮಸ್ಯೆಗಳು ನಿವಾರಣೆಯಾಗುತ್ತವೆ.ಎಂದು ಜನಪದರು ನಂಬಿದ್ದಾರೆ.

ಈ ವಲೀಗಳ ಮೇಲೆ ಅಪಾರವಾದ ಭಕ್ತಿ ಹೊಂದಿರುವ ಭಕ್ತರ ಕನಸಿನಲ್ಲಿ ಬಂದು ಸಲಹೆ ಸೂಚನೆಗಳನ್ನು ನೀಡುತ್ತಾರೆ ಎಂದು ಜನಪದರು ಹೇಳುತ್ತಾರೆ.ಇಂತಹ ಸೂಚನೆಗಳನ್ನು ಅನುಸರಿಸಿ "ವಲೀ"ಯವರ ಉತ್ಸವ (ಗಂಧ) ನಡೆಯುತ್ತದೆ.ಗಂಧದ ಸಂದರ್ಭದಲ್ಲಿ ದರ್ಗಾಕ್ಕೆ ಭೇಟಿಕೊಟ್ಟು, ತಮ್ಮ ಇಚ್ಚಾನುಸಾರವಾಗಿ ಮಾಡಿಕೊಂಡ ಹರಕೆಗಳನ್ನು ತೀರಿಸುತ್ತಾರೆ.ಇಂತಹ ಉತ್ಸವಗಳು ಕನಕಪುರ ತಾಲ್ಲೂಕಿನ ದರ್ಗಾಗಳಲ್ಲಿಯೂ ನಡೆಸಲಾಗುತ್ತದೆ.ಈ ತಾಲ್ಲೂಕಿನಲ್ಲಿರುವ

ಪ್ರಮುಖ ದರ್ಗಾಗಳಲ್ಲಿ ಅನೇಕ ಹರಕೆಗಳು ಪ್ರತಿವರ್ಷವು ನಡೆಯುತ್ತವೆ. ಈ ಸಂದರ್ಭದಲ್ಲಿ ದರ್ಗಾವನ್ನು ನಂಬಿ "ವಲೀ"ರವರನ್ನು ಆರಾಧಿಸುವ ಭಕ್ತರು, ದರ್ಗಾವಿರುವ ಊರಿನಿಂದ ಬೇರೆ–ಬೇರೆ ಊರಿನಲ್ಲಿ ನೆಲೆಸಿದ್ದರು. ವಲೀಯವರ ಆಸ್ಥಾನಕ್ಕೆ ತಪ್ಪದೇ ಬಂದು ಅವರ ಇಚ್ಚಾನುಸಾರವಾಗಿ ಉತ್ಸವದ ಖರ್ಚು ವೆಚ್ಚದಲ್ಲಿ ಭಾಗಿಯಾಗಿ ಇಡೀ ರಾತ್ರಿ ಉತ್ಸವದಲ್ಲಿ ಪಾಲುಗೊಳ್ಳುತ್ತಾರೆ.

ಕನಕಪುರ ತಾಲ್ಲೂಕಿನ ದರ್ಗಾಗಳಲ್ಲಿ ಉರುಸ್‌ನ್ನು ಆಚರಿಸಲಾಗುತ್ತದೆ.ವಲೀರವರ ಅಪ್ಪಣೆಯಂತೆ ಮೊದಲೇ ಮಾಡಿಕೊಂಡು ಬಂದಿರುವ ತಿಂಗಳಿನಲ್ಲಿ ಉರುಸ್ ಆಚರಿಸುತ್ತಾರೆ.ಉರುಸ್ ಆಚರಣೆಯ ದಿನ ದರ್ಗಾವನ್ನು ಸಂಪೂರ್ಣವಾಗಿ ಹೂವು ಮತ್ತು ದೀಪಾಲಂಕಾರಗಳಿಂದ ಸಿಂಗರಿಸಿ ಹೆದ್ದಾರಿಯಿಂದ ದರ್ಗಾದವರೆಗೆ ದೀಪಾಲಂಕಾರಗಳನ್ನು ಮಾಡಿರುತ್ತಾರೆ.ಕನಕಪುರ ತಾಲ್ಲೂಕಿನ ದರ್ಗಾಗಳಲ್ಲಿ ಸಾಮಾನ್ಯವಾಗಿ ವಲೀಗಳು ಹುಟ್ಟಿದ ಅಥವಾ ದೈವಾಧೀನರಾದ ದಿನದಂದು ಅಥವಾ 'ವಲೀ'ರವರು ಅಲ್ಲಿರುವ "ಮುರ್ಷದ್" ಮೂಲಕ ಅಪ್ಪಣೆ ಕೊಟ್ಟ ತಿಂಗಳಿನಲ್ಲಿ ಉರುಸ್ ಆಚರಿಸುತ್ತಾರೆ.

ಇಂತಹ ಸಂದರ್ಭದಲ್ಲಿ ಉರುಸ್ ದಿನದಂದು ಆ ಊರಿನ ಬೀದಿಗಳಲ್ಲಿ "ಜುಲುಸ್" ಹೊರಡುತ್ತದೆ.ಒಬ್ಬ ವ್ಯಕ್ತಿ ಕುದುರೆ ಮೇಲೆ ಅಥವಾ ಜಮಾಖಾನದ ಮೇಲೆ ಗಂಧ ಮತ್ತು ಹೂಗಳನ್ನು ತಲೆಯ ಮೇಲೆ ಹೊತ್ತಿಕೊಂಡು ಹೊರಡುವಾಗ ಇಬ್ಬರು ಇವನ ಸಹಾಯಕ್ಕೆ ಗಂಧ ಪುಷ್ಪಗಳನ್ನು ಹಿಡಿದಿರುತ್ತಾರೆ.ಇನ್ನು ಕೆಲವು ಹುಡುಗರು ಹೂ ಮತ್ತು ಬಟ್ಟೆಗಳನ್ನು ಹಿಡಿದು ಅವರೊಂದಿಗೆ ಹೆಜ್ಜೆ ಹಾಕುತ್ತಾರೆ. ಒಬ್ಬ ಯುವಕ "ಊದ್‌ದಾನ್" ಹಿಡಿದಿರುತ್ತಾನೆ. ಇದರಲ್ಲಿ ಸಾಂಬ್ರಾಣಿ ಹೊಗೆ ಹಾಗೂ ಗಂಧದಕಡ್ಡಿ ಉರುಸನ್ ಮೆರವಣಿಗೆ ಮುಗಿಯುವವರೆಗೂ ಸಾಂಬ್ರಾಣಿ ಹೊಗೆ ಇರುವ ಹಾಗೆ ನೋಡಿಕೊಳ್ಳುತ್ತಾರೆ.

ಉರುಸ್‌ನ ಉತ್ಸವ ಬೀದಿಯಲ್ಲಿ ಸಾಗುವಾಗ ಪ್ರತಿ ಮನೆಯ ಮುಂದೆ ಬಂದಾಗ ಹೂವು, ಸಾಂಬ್ರಾಣಿ ಹಾಗೂ ಅವರ ಹರಕೆಗಳಿದ್ದಲ್ಲಿ ಆ ಹರಕೆಯನ್ನು ತೀರುಸುವರು.ಹೀಗೆ ಉರುಸ್‌ನ ಮೆರವಣಿಗೆ ನಡೆಯುವುದು.ಮೆರವಣಿಗೆಯಲ್ಲಿ ಸಮೂಹಗಳ ಭೇದ ಭಾವವಿಲ್ಲದೇ ಎಲ್ಲಾ ಧರ್ಮೀಯರು ಸಹಬಾಳ್ವೆಯ ಭಾಜನವಾಗಿ ಎಲ್ಲರು ಸೇರಿ ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಾರೆ.ಉರುಸ್ ಸಂದರ್ಭಗಳಲ್ಲಿ ವಲೀರವರನ್ನು ನಂಬುವ ಹಾಗೂ ವಲೀರವರ ಹೆಸರಿನಲ್ಲಿ ಹರಕೆ ಮಾಡಿಕೊಂಡಿರುವವರು ತಮ್ಮ ಹರಕೆಯ ಅನುಸಾರ ಹರಕೆಯನ್ನು ತೀರಿಸುವರು.ಇಂತಹ ಹರಕೆಗಳಲ್ಲಿ ಪ್ರಮುಖವಾಗಿ "ವಲೀ'ರವರ ಸಮಾಧಿಯ ಮೇಲೆ "ಹಸಿರು

ಚಾದರ್" ಹೂವಿನ ಚಾದರ್, ಹಸೇನ್, ಹುಸೇನ್ ರವರ 'ಪಂಜೇ (ಕೈಹಸ್ತ) ನೀಡುವರು. ಇನ್ನು ಕೆಲವರು ಹುಂಡಿಗೆ ಹಣ, ಉತ್ಸವಕ್ಕೆ ದರ್ಗಾದ ದೀಪಾಲಂಕಾರ, ದರ್ಗಾದ ಸ್ವಚ್ಛತೆ, ದರ್ಗಾಕ್ಕೆ ಸುಣ್ಣ ಬಣ್ಣ, ಭಕ್ತಾದಿಗಳಿಗೆ ಉಳಿದುಕೊಳ್ಳಲು ವ್ಯವಸ್ಥೆ, ನೀರಿನ ವ್ಯವಸ್ಥೆ, ಬಂದ ಭಕ್ತಾದಿಗಳಿಗೆ ಊಟದ ವ್ಯವಸ್ಥೆಗೆ ಅಕ್ಕಿ, ಮಾಂಸ, ತರಕಾರಿ, ಊಟದ ಎಲೆ, ಊಟ ಮಾಡುವ ಶಾಮಿಯಾನ ಮತ್ತು ಕುಳಿತುಕೊಳ್ಳಲು ಆಸನಗಳ ವ್ಯವಸ್ಥೆ ಹೀಗೆ ಅವರ ಹರಕೆ ಮತ್ತು ಇಚ್ಛಾನುಸಾರವಾಗಿ ದರ್ಗಾಗಳಿಗೆ ಸಹಾಯ ಮತ್ತು ಹರಕೆಗಳನ್ನು ತೀರಿಸಿ "ವಲೀ" ರವರ ಕೃಪೆಗೆ ಪಾತ್ರರಾಗುತ್ತಾರೆ.

ಉರುಸ್‌ಗೆ ಬಂದವರು ತಮ್ಮ ಹರಕೆಗಳನ್ನು ತೀರಿಸಲು ಎರಡು ಮೂರು ದಿನ ಮೊದಲೇ ಬಂದು ಹರಕೆಯಲ್ಲಿ ನಿಶ್ಚಯಿಸಿದಂತೆ, ಕುರಿ, ಕೋಳಿ, ಟಗರುಗಳನ್ನು, ವಲೀರವರ ಹೆಸರಿನಲ್ಲಿ "ಜುಬ್ಹಾ" ಮಾಡಿಸಿ ಅಡುಗೆ ಮಾಡಿ ಎರಡು ತಟ್ಟೆ ಭಕ್ಷ್ಯಗಳನ್ನು ಮೊದಲು "ವಲೀ"ರವರ ಹೆಸರಿನಲ್ಲಿ ದರ್ಗಾದಲ್ಲಿ ಇರುವ ಮುರ್ಷದ್ ಅಥವಾ ಫಖೀರ್ ರವರಿಂದ "ಫಾತೇಹ" ಓದಿಸಿದ ನಂತರ ಹರಕೆ ಒಪ್ಪಿಸಿದ ಮತ್ತು ಅಲ್ಲಿಗೆ ಬಂದಿರುವ ಭಕ್ತಾದಿಗಳಿಗೆ ಊಟ ಮಾಡಿಸುವರು. ಇದಲ್ಲದೇ ಇನ್ನು ಕೆಲವರು ಹೂವಿನ ಚಾದರ ತೊಟ್ಟಿಲು, ಬಳೆ, ಸೇಗಾ ಮುರ್ಷಾದ್‌ರವರಿಗೆ ಹಣವನ್ನು ನೀಡಿ "ವಲೀ" ರವರ ಕೃಪೆಗೆ ಪಾತ್ರರಾಗುತ್ತಾರೆ.

ಉರುಸ್‌ನ ಸಂದರ್ಭದಲ್ಲಿ ಉರುಸ್‌ಗೆ ಬರುವ ಭಕ್ತಾದಿಗಳಿಗೆ ಊರಿನ ಹಿರಿಯರು ಮತ್ತು ಯುವಕರೊಳಗೊಂಡ ಊರಿನವರು ಹೊರಗಿನ ಭಕ್ತಾದಿಗಳು ಸೇರಿ ಊಟದ ವ್ಯವಸ್ಥೆ ಮಾಡಿರುತ್ತಾರೆ.ಈ ಊಟದ ವ್ಯವಸ್ಥೆಯಲ್ಲಿ ಹೆಂಗಸರಿಗೆ ಪ್ರತ್ಯೇಕ ಹಾಗೂ ಗಂಡಸರಿಗೆ ಪ್ರತ್ಯೇಕವಾದ ವ್ಯವಸ್ಥೆ ಮಾಡಿರುತ್ತಾರೆ.ಹೆಂಗಸರ ವ್ಯವಸ್ಥೆಯಲ್ಲಿ ಹೆಂಗಸರೇ ಅವರಿಗೆ ಬೇಕಾದ ಊಟದ ವ್ಯವಸ್ಥೆ ಮಾಡುವರು ಗಂಡಸರಿಗೆ ಗಂಡಸರೇ ಅದರಲ್ಲಿಯು ಯುವಕರು ಊಟೋಪಚಾರಗಳ ವ್ಯವಸ್ಥೆಯನ್ನು ನಿರ್ವಹಿಸುವರು.ಈ ಊಟದ ವ್ಯವಸ್ಥೆಯಲ್ಲಿ ಬಿರಿಯಾನಿ, ಕುಷ್ಕ, ಕುರ್ಮಾ, ಚಿಕನ್‌ಕಬಾಬ್, ಬೇಳೆಸಾರು, ಮೊಸರುಬಜ್ಜಿ, ಹಪ್ಪಳ ಇತ್ಯಾದಿಯಾಗಿ ತಯಾರಿಸುವರು.ಈ ಭೋಜನವನ್ನು ಭಕ್ತಾದಿಗಳು ಬಹಳ ಗೌರವದಿಂದ "ತಬ್ರುಕ್" ಎಂದು ಸ್ವೀಕರಿಸುವರು.ಉರುಸ್‌ನಲ್ಲಿ ಭಾಗವಹಿಸಿ ರಾತ್ರಿ ಇಡೀ ವಲೀ ರವರ ಮತ್ತು ಅಲ್ಲಾನ ನಾಮವನ್ನು ನೆನೆಯಲು ಪ್ರಸಿದ್ಧ ಖವಾಲಿ ಗಾಯಕರುಗಳನ್ನು ಕರೆಸಿ ಖವಾಲಿ ನಡೆಸುತ್ತಾರೆ.ಹೀಗೆ ದರ್ಗಾಗಳಲ್ಲಿ ಪ್ರತಿ ವರ್ಷವು ವಲೀಗಳ ಹೆಸರಿನಲ್ಲಿ ಉರುಸ್ ನಡೆಯುತ್ತದೆ.

ಇಂತಹ ಆಚರಣೆಗಳು ಕನಕಪುರ ತಾಲ್ಲೂಕಿನಲ್ಲಿ ಕಂಡುಬರುತ್ತವೆ. ಈ ಆಚರಣೆಗಳು ಹಿಂದೂಗಳ ಪ್ರಭಾವದಿಂದ ಮುಸ್ಲಿಂರು ಆಚರಿಸುತ್ತಿದ್ದಾರೆಯೇ? ಇಲ್ಲ ಬೇರೆ ಧರ್ಮದಿಂದ

ಮತಾಂತರಾದ ಕೆಲವು ಮುಸ್ಲಿಂರು ಆಚರಿಸುತ್ತಿದ್ದಾರಿಯೇ?. ಎಂಬುದನ್ನು ಹೇಳಲಾಗುವುದಿಲ್ಲ, ಏಕೆಂದರೆ ಕನಕಪುರ ತಾಲ್ಲುಕಿನ ಶೇ 60 ರಿಂದ 70 ರಷ್ಟು ಮುಸ್ಲಿಂರು ದರ್ಗಾಗಳಿಗೆ ಮತ್ತು ಉರುಸ್‌ನಲ್ಲಿ ಭಾಗವಹಿಸಿ "ವಲೀ"ಯವರನ್ನು ನೆನೆಯುವುದು ಕಂಡುಬರುತ್ತದೆ. ಇವರನ್ನು ಸಂದರ್ಶನ ಮಾಡಿದಾಗ ಭಕ್ತಾದಿಗಳು 'ವಲೀ"ರವರನ್ನು "ಅಲ್ಲಾವಲೀ" ಇಲ್ಲದೇ ಯಾರು ಇಲ್ಲ ಅಲ್ಲಾನ ಸಂದೇಶಕರಾಗಿ ಇವರು ಬಂದವರು ಎಂದು ತಿಳಿಸಿ ಅವರ ವಿರುದ್ಧವಾಗಿ ಮಾತನಾಡುವರ ವಿರುದ್ದ ಮಾತಿನ ಚಕಮಕಿಗೆ ಇಳಿದು ಉದ್ವೇಗಕ್ಕೆ ಒಳಗಾಗುವುದನ್ನು ಕಾಣಬಹುದಾಗದೆ.ಇಂತಹ ಆಚರಣೆಗಳನ್ನು ಕೆಲವು ಸಂಪ್ರದಾಯಸ್ಥ ಮುಸ್ಲಿಮರು ಈ ರೀತಿಯ ಆಚರಣೆಗಳಿಗೆ ಪ್ರೋತ್ಸಾಹ ಕೊಡುವುದಿಲ್ಲ. ಇವುಗಳಿಂದ ದೂರವಿಡಲು ಮತ್ತು ಇಂತಹ ಆಚರಣೆಗಳನ್ನು ನಿಲ್ಲಿಸಬೇಕೆಂದು ಪ್ರಯತ್ನಿಸುತ್ತಿದ್ದಾರೆ.ಆದರೂ ಕೂಡ ತಲೆ ತಲಾಂತರಗಳಿಂದ ಬೆಳೆದುಕೊಂಡು ಬಂದಿರುವ ದರ್ಗಾಗಳ ಭೇಟಿ ಮತ್ತು ದರ್ಗಾಗಳಲ್ಲಿ ನಡೆಯುವ ಉತ್ಸವಗಳು ಕಡಿಮೆಯಾಗಿಲ್ಲ. ಇನ್ನು ಹೆಚ್ಚಾಗುತ್ತಿವೆ.

ಕನಕಪುರ ತಾಲ್ಲೂಕಿನ ಜಿಲ್ಲೆಯಾದ ರಾಮನಗರ ಪಟ್ಟಣದಲ್ಲಿ 200 ದರ್ಗಾಗಳಿರುವುದು.ಗಮನಾರ್ಹವಾಗಿದೆ.ಈ ಆಚರಣೆ "ದರ್ಗಾ" ವಲೀಯವರ ಮೇಲಿನ ನಂಬಿಕೆ ವಿಶ್ವಾಸಗಳನ್ನು ತಿಳಿಸಿಕೊಡುತ್ತವೆ. ಇನ್ನು ಕೆಲವರು ಇದರ ಅನರ್ಥವಾದ ಆಚರಣೆಗಳು ಇಸ್ಲಾಂನಲ್ಲಿ ಈ ಆಚರಣೆಗೆ ಅವಕಾಶವಿಲ್ಲ. ಸಾಂಬ್ರಾಣಿ ಹಾಕುವುದು.ಗಂಧದಕಡ್ಡಿ ಹಚ್ಚುವುದು.ಕಾಯಿ ಒಡೆಯುವುದು, ಹೂವಿನ ಚಾದರ್ ಹಾಕುವುದು.ಕೆಲವೊಂದು ಅಲಂಕಾರ ಕಾಗದಗಳಿಂದ ಶೃಂಗರಿಸುವುದು.ಇವುಗಳೆಲ್ಲ ಮೌಲ್ವಿಗಳು ಹೇಳುತ್ತಾರೆ.ಹೀಗೆ ಏನೇ ವಾದ ವಿವಾದವಿದ್ದರೂ ದರ್ಗಾಗಳು ಹಲವು ಆಚರಣೆಗಳ ಸಹಬಾಳ್ವೆಗೆ ಸಹಕಾರಿಯಾದ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ "ದರ್ಗಾಗಳು" ತಮ್ಮದೇ ಆದ ಕೊಡುಗೆಯನ್ನು ಸಮಾಜಕ್ಕೆ ನೀಡುತ್ತಿವೆ.

**ದರ್ಗಾಗಳಲ್ಲಿ ಮೊಹರಂ ಆಚರಣೆ**

ಕನಕಪುರ ತಾಲ್ಲೂಕಿನ ಬಹುತೇಕ ದರ್ಗಾಗಳಲ್ಲಿ ಮೊಹರಂನ್ನು ಆಚರಿಸುತ್ತಾರೆ.ಅವುಗಳಲ್ಲಿ ಪ್ರಮುಖವಾಗಿ ಆಡನಕುಪ್ಪೆ, ತುಂಗಣಿ, ಸಂತೇಕೋಡಿಹಳ್ಳಿ, ಹೂಕುಂದಗಳಲ್ಲಿ ಆಚರಿಸುತ್ತಾರೆ.ಹಸೇನ್-ಹುಸೇನ್ ರವರ ನಾಮವನ್ನು ಜಪಿಸುತ್ತಾ ಹಿಂದೂ-ಮುಸ್ಲಿಂ ಎಂಬ ಭೇದವಿಲ್ಲದೆ ಒಟ್ಟಾಗಿ ಈ ಆಚರಣೆಯನ್ನು ಆಚರಿಸುತ್ತಾರೆ.ಮೊಹರಂ ಎಂದರೆ ಒಂದು ತಿಂಗಳಿಗೆ

ಅನ್ವಯವಾಗುವ ಹೆಸರು, ಮುಸ್ಲಿಮರ ಇಸ್ಲಾಂ ಸಂವತ್ಸರದ ಪ್ರಥಮ ತಿಂಗಳಾಗಿದೆ.ಈ ತಿಂಗಳಿನಲ್ಲಿ ಮುಸ್ಲಿಂ- ಹಿಂದೂ ಬಾಂಧವರು ಒಂದಾಗಿ ದುಃಖವನ್ನು ವ್ಯಕ್ತಪಡಿಸುತ್ತಾರೆ.

ಮೊಹರಂ ಆಚರಣೆಯನ್ನು ಗ್ರಹಿಸಿದಾಗ 300 ವರ್ಷಗಳ ಹಿಂದೆ ಇರಾನಿನಲ್ಲಿ ಬಾಗ್ದಾದ್‌ನಿಂದ ಕೆಲವು ಮೈಲಿ ದೂರವಿರುವ "ಯುಫ್ರೇಟಿಸ್" ನದಿ ತೀರದಲ್ಲಿ ನಡೆದ ದುರಂತ ಘಟನೆಯೇ ಇದಕ್ಕೆ ಕಾರಣ.ವರ್ಷದ ಪ್ರಥಮ ತಿಂಗಳಿನ ಹತ್ತನೇಯ ದಿನ ಮಹಮದ್ ಪೈಗಂಬರ್‌ರವರ ವಂಶಸ್ಥರಾದ ಇಮಾಮ್ ಹುಸೇನ್‌ರವರು ಧಾರುಣರಾಗಿ ಹುತಾತ್ಮರಾದ ದಿನ.

ಈ ದಿನ ಮೊಹರಂನ್ನು ಆಚರಿಸಿಕೊಂಡು ಬಂದಿರುವುದು ಕನಕಪುರ ತಾಲ್ಲೂಕಿನಲ್ಲಿ ಕಂಡುಬರುತ್ತದೆ.ಈ ಆಚರಣೆಯು ಶೋಕದ ಸಂಕೇತವಾಗಿರುವುದರಿಂದ ಅಲ್ಲಿ ನೆರೆದ ಜನರೆಲ್ಲರು ದುಃಖವನ್ನು ವ್ಯಕ್ತಪಡಿಸುತ್ತಾ "ಯಾ ಅಲಿ ಹಸೇನ್-ಹುಸೇನ್" ಅವರ ಹೆಸರನ್ನು ಜಪಿಸುತ್ತಾ ಕೊಂಡದ (ಅಲಾವ) ಸುತ್ತ ಒಬ್ಬರ ಕೈಯನ್ನು ಇನ್ನೊಬ್ಬರು ಹಿಡಿದುಕೊಳ್ಳುವ ಮೂಲಕ ತಿರುಗುತ್ತಾರೆ.ನಂತರ ಅಲಾವದ ಸೌದೆಗಳು ಉರಿದ ಮೇಲೆ ಆಡನಕುಪ್ಪೆ ಮತ್ತು ತುಂಗಣಿ ಬೆಳಗಿನ ಜಾವ ಫಜರ್ ನಮಾಜಿನ ನಂತರ ಅಲಾವಕ್ಕೆ ಇಳಿದು ಬೆಂಕಿಯ ಕೆಂಡಗಳನ್ನು ಕೈಗಳಿಂದ ಎರಚುತ್ತಾರೆ.ಈ ಕೆಂಡಗಳು ಅಲ್ಲಿ ನೆರೆದಿರುವಂತಹ ಮೈಯ ಮೇಲೆ ಬಿದ್ದರು ಬಟ್ಟೆಗಳು ಸುಡುವುದಿಲ್ಲ ಎಂಬ ನಂಬಿಕೆ ಇದೆ. ಹಾಗೂ ಹರಕೆ ಕಟ್ಟಿಕೊಂಡವರು ಕೆಂಡ ಮೇಲೆ ಬೀಳಲೆಂದು ಬೆಂಕಿಕೆಂಡ ಎರಚುವ ಕಡೆ ನಿಲ್ಲುತ್ತಾರೆ.

ಅಲಾವಾದ ನಂತರ ಕತ್ತಿನ ಸುತ್ತ ಎದ್ದಿರುವ ಸಣ್ಣ-ಪುಟ್ಟ ಗುಳ್ಳೆಗಳು ನಿವಾರಣೆಯಾಗಲು ಹರಕೆ ಮಾಡಿಕೊಂಡು ಅಲಾವಕ್ಕೆ ಉಪ್ಪನ್ನು ಮತ್ತು ಹರಳನ್ನು ಹಾಕುತ್ತಾರೆ.ನಂತರ ಬೆಳಗಿನ ಜಾವ ಹಸೇನ್-ಹುಸೇನ್‌ರವರ ಪಂಜೆಗಳನ್ನು ಮೆರವಣಿಗೆಯ ಮುಖಾಂತರ ಆ ಊರಿನ ದರ್ಗಾದ ಹತ್ತಿರ ತೆಗೆದೊಕೊಂಡು ಹೋಗಿ ಪ್ರಾರ್ಥನೆ ಸಲ್ಲಿಸಿ ಊರಿನ ಮುಖ್ಯ ಬೀದಿಗಳಲ್ಲಿ ಮೆರವಣಿಗೆ ಮಾಡಲಾಗುತ್ತದೆ.ಈ ಮೊಹರಂ ಆಚರಣೆಯಲ್ಲಿ ಆ ಊರಿನ ಪ್ರತಿ ಮನೆಯಲ್ಲಿಯು ಖಿಚಡಿ ಮತ್ತು ಚೋಂಗೆಗಳನ್ನು ಮಾಡಿ ಬಂದಭಕ್ತಾದಿಗಳಿಗೆ ನೀಡಲಾಗುತ್ತದೆ.ಈ ದಿನ ಯಾವುದೇ ಸಂತೋಷ ಕೂಟಗಳನ್ನಾಗಲಿ, ಮಾಂಸದ ಅಡುಗೆಯನ್ನಾಗಲಿ ಮಾಡುವುದಿಲ್ಲ. ಹಸೇನ್-ಹುಸೇನ್‌ರವರು ಯುದ್ಧದ ಸಂದರ್ಭದಲ್ಲಿ ಸೇವಿಸಿದ ಆಹಾರಗಳನ್ನು ಆ ದಿನ ಸೇವಿಸಲಾಗುವುದು. ಎಂದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ವಕ್ತೃಗಳು ಹೇಳುತ್ತಾರೆ.

ಮೊಹರಂ ಆಚರಣೆಯ ಹತ್ತು ದಿನಗಳ ಕಾಲ ನಡೆಯುತ್ತದೆ. ಅದರಲ್ಲಿ 9,10ನೇಯ ದಿನದಂದು ಕೊನೆಯ ದಿನವಾಗಿದ್ದು, ಈ ದಿನಗಳಲ್ಲಿ ಈ ಮೇಲಿನ ಎಲ್ಲಾ ಆಚರಣೆಗಳು ಕನಕಪುರ ತಾಲ್ಲೂಕಿನ ಕೆಲವು ದರ್ಗಾಗಳಲ್ಲಿ ಆಚರಿಸಲಾಗುತ್ತದೆ. ಭಕ್ತಾದಿಗಳು ತಮ್ಮ ಇಚ್ಛೆಗೆ ಅನುಸಾರವಾಗಿ ಹರಕೆಗಳನ್ನು ಪೂರೈಸುತ್ತಾರೆ.ಮೊಹರಂಗೆ ಬಂದ ಭಕ್ತಾದಿಗಳು ಹಸೇನ್-ಹುಸೇನ್ ಹಾಗೂ ವಲೀಗಳ ಹೆಸರಿನಲ್ಲಿ ಗಂಧದಕಡ್ಡಿ, ಬೆಲ್ಲ, ಸಕ್ಕರೆ, ಕಡಲೆಪುರಿ, ಬೂಂದಿ, ಮಲೀದಾಗಳನ್ನು ಪಂಜೆಗಳ ಮುಂದಿಟ್ಟು ಮುರ್ಷದ್ ರವರಿಂದ ಫಾತೇಹ ಓದಲಾಗುತ್ತದೆ.ಆ ಪಂಜೆಗಳನ್ನು ಇಡಲು ಪ್ರತ್ಯೇಕ ಜಗಲಿ ಕಟ್ಟೆಯನ್ನು ಮಿನುಗುವ ವರ್ಣರಂಜಿತ ಪ್ಲಾಸ್ಟಿಕ್ ಹೂಗಳಿಂದ ಸಿಂಗರಿಸಿ ದೀಪಾಲಂಕಾರಗಳನ್ನು ಮಾಡಲಾಗುತ್ತದೆ.

ಅದೇರೀತಿ ಆ ಊರಿನ ದರ್ಗಾಗಳಿಗೆ ದೀಪಾಲಂಕಾರ ಮಾಡಿ ವಲೀಯವರ ಸಮಾಧಿಗೆ ಹೂವಿನ ಚಾದರ್ ಹಾಕಲಾಗುತ್ತದೆ. ಹಾಗೂ ಬಂದ ಭಕ್ತಾದಿಗಳು ವಲೀಗಳ ದರ್ಗಾದಲ್ಲಿರುವ ಮುರ್ಷದ್ ರವರಿಂದ ಫಾತೇಹ ಓದಿಸುತ್ತಾರೆ. ಹೀಗೆ ಕನಕಪುರ ತಾಲ್ಲೂಕಿನ ಕೆಲವು ದರ್ಗಾಗಳಲ್ಲಿ ಮೊಹರಂ ಆಚರಣೆಯನ್ನು ಆಚರಿಸುವುದು ಕಂಡುಬರುತ್ತದೆ.

ಹೀಗೆ ಕನಕಪುರ ತಾಲ್ಲೂಕಿನಾದ್ಯಂತ ಇರುವಂತಹ ದರ್ಗಾಗಳಲ್ಲಿ ಈ ರೀತಿಯ ಆಚರಣೆಗಳು ಕಂಡುಬರುತ್ತದೆ. ಇಂತಹ ಆಚರಣೆಗಳನ್ನು ಒಳಗೊಂಡಂತಹ ಕನಕಪುರ ತಾಲ್ಲೂಕಿನ ದರ್ಗಾಗಳ ಮಾಹಿತಿ ಮತ್ತು ವಲೀಯವರ ಪವಾಡ, ಐತಿಹ್ಯ ಹಾಗೂ ಊರುಸ್‌ಗಳ ಬಗ್ಗೆ ಈ ಕೆಳಕಂಡಂತೆ ಗಮನಿಸಬಹುದಾಗಿದೆ.

**ಕನಕಪುರ ಪಟ್ಟಣದ ದರ್ಗಾಗಳು**

ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಿಂದ 56 ಕಿ.ಮೀ ದೂರದಲ್ಲಿರುವ ಕನಕಪುರವು ರಾಮನಗರ ಜಿಲ್ಲೆಯಿಂದ ಕೇವಲ 27 ಕಿಮೀ ಅಂತರದಲ್ಲಿರುವ ಕನಕಪುರದಲ್ಲಿ ಪ್ರಮುಖವಾಗಿ ಈ ಕೆಳಕಂಡ ದರ್ಗಾಗಳಿವೆ.

- ಹಜರತ್ ದೀದಾರ್ ಅಲಿಷಾ ಚಷತಿ ಮವಾರುಫ್ ಕಮಲಿ ಫೀರ್ ಬಾಬಾ
- ರಹಮತ್ ಉಲ್ಲಾ ಅಲೈ
- ಯಾಕುಬ್ ಅಲಿಷಾ
- ಖಾನ್‌ಖಾನ್ ಬಹದೂರ್
- ಕೌಸರ್ ಅಲಿಷಾ

**ಹಜರತ್ ದೀದಾರ್ ಅಲಿಷಾ ಚಷತಿ ಅಥವಾ ಕಮಲಿ ಪೀರ್ – ಮವಾರೂಫ್ ಬಾಬಾ**

ಕನಕಪುರ ಕೇಂದ್ರ ಭಾಗವಾಗಿರುವ ಇಂದಿರಾನಗರದ ಪಕ್ಕದಲ್ಲಿರುವ ಮಕಾನ್ (ಸ್ಮಶಾನ) ದಲ್ಲಿ ದೀದಾರ್ ಅಲಿ ಷಾ ಚಷತಿ ಅಥವಾ ಕಮಲಿ ಪೀರ್ ಮವಾರುಫ್ ದರ್ಗಾವಿದೆ. ಈ ದರ್ಗಾವು ಹಲವಾರು ಐತಿಹ್ಯಗಳನ್ನು ಹೊಂದಿರುವ ದರ್ಗಾವಾಗಿದೆ. ಸುಮಾರು 100 ವರ್ಷಗಳ ಹಿಂದೆ ಈ ವಲೀಯವರು ಇಲ್ಲಿ ಐಕ್ಯರಾದರು ಎಂದು ತಿಳಿಸಲಾಗುತ್ತದೆ.ಇವರ ಅಪ್ಪಣೆಯ ಮೇರೆಗೆ 16-06-2015 ರಂದು 90ನೇಯ ಉರುಸ್ ನಡೆಸಲಾಯಿತು.

ಈ ಉರುಸ್‌ನಲ್ಲಿ ಕನಕಪುರ ಪಟ್ಟಣದ ಭಕ್ತಾದಿಗಳು ಸೇರಿ ಸುಮಾರು 3000 ಭಕ್ತಾದಿಗಳು ಪಾಲ್ಗೊಂಡಿದ್ದರು.ಈ ಸಮಯದಲ್ಲಿ ಬಹಳ ವೈಭವದಿಂದ ಹೂ ಮತ್ತು ಹಸಿರು ಚಾದರ್ ಗಂಧದ ಮೆರವಣಿಗೆಯಿಂದ ಬಂದು ವಲೀಯವರ ಸಮಾಧಿಯ ಮೇಲೆ ಹೊದಿಸಲಾಯಿತು.ನೆರೆದಂತಹ ಭಕ್ತಾದಿಗಳು ತಮ್ಮ ಇಷ್ಟಾನುಸಾರವಾದಂತಹ ಹರಕೆಗಳನ್ನು ಮಾಡಿಕೊಳ್ಳುವ ಇನ್ನು ಕೆಲವರು ಮಾಡಿಕೊಂಡಿದ್ದಂತಹ ಹರಕೆಗಳನ್ನು ತೀರಿಸಿ ವಲೀಯವರ ಸಮಾಧಿಯ ದರ್ಶನ ಪಡೆಯುವ ಇನ್ನು ಕೆಲವರು ಬೂಂದಿ, ಕಡಲೆಪುರಿ, ಹುರಿಗಡಲೆ, ಸಕ್ಕರೆ, ಬೆಲ್ಲ, ಮಲೀದಾ, ಸಿಹಿಅನ್ನ, ಜೊತೆಗೆ ಬಾಳೆ ಮತ್ತು ಸಕ್ಕರೆ ಜೊತೆಗೆ ಗಂಧದ ಕಡ್ಡಿ, ಸಾಂಬ್ರಾಣಿ, ಹೂಗಳನ್ನು ಅಲ್ಲಿನ ಮುರ್ಷದ್ ರವರ ಮೂಲಕ ವಲೀಯವರ ಹೆಸರಿನಲ್ಲಿ ಫಾತೇಹ (ಪೂಜೆ) ಮಾಡಿಸುವರು..

ಯುವತಿಯರು, ಹೆಂಗಸರು, ಯುವಕರು, ಗಂಡಸರು, ಮಕ್ಕಳು ಎಲ್ಲರು ವಲೀಯವರ ಸಮಾಧಿಯ ಸುತ್ತ ಕುಳಿತು ಯಾಸೀನ್ (ಕುರಾನಿನ ಒಂದು ಸೂತ್ರ) ಓದುವರು ಇನ್ನು ಕೆಲವರು ತಸಬೀ (ಜಪಮಾಲೆ)ಯನ್ನು ಹಿಡಿದು ಅಲ್ಲಾನ ಹೆಸರಿನಲ್ಲಿ ಮಣಿಯನ್ನು ಎಣಿಸುತ್ತಾ ಜಪಿಸುವರು. ಹೀಗೆ ನಾನಾ ರೀತಿಯ ಪೂಜಾಕಾರ್ಯಗಳು ಪ್ರತಿ ವರ್ಷ ಷಾಬಾನ್ ತಿಂಗಳಿನಲ್ಲಿ ಗಂಧ (ಉರುಸ್) ಆಚರಿಸಲಾಗುವುದು.ಇಲ್ಲಿಗೆ ಭೇಟಿ ಕೊಟ್ಟ ಭಕ್ತಾದಿಗಳು ಬಹುತೇಕ ಬೇಡಿಕೆಗಳು ಈಡೇರಿವೆ ಎಂದು ಅಲ್ಲಿಗೆ ಬಂದ ಭಕ್ತಾದಿಗಳಿಂದ ತಿಳಿದು ಬರುತ್ತದೆ.ಸುಪ್ರಿಸಿದ್ಧ ಖವಾಲಿ ಗಾಯಕರನ್ನು ಕರೆಸಿ ಸವಾಲ್-ಜವಾಬ್ ಹಾಡುವ ಮುಖಾಂತರ ವಲೀ ಮತ್ತು ಅಲ್ಲಾನ ಗುಣಗಾನವನ್ನು ಹಾಡಲಾಗುತ್ತದೆ.ಖವಾಲಿಯಲ್ಲಿ ಎರಡು ಗುಂಪುಗಳಿರುತ್ತವೆ. ಒಂದು ಗುಂಪು ಖವಾಲಿಯ ಮೂಲಕ ಹಾಕಿದ ಸವಾಲನ್ನು ಇನ್ನೊಂದು ಗುಂಪು ಉತ್ತರವಾಗಿ ಹಾಡಬೇಕಾಗುತ್ತದೆ.ಪ್ರಶ್ನೆ ಮತ್ತು ಉತ್ತರವು ರಾಗಬದ್ದವಾಗಿ ಕೇಳುವರಿಗೆ ಅರ್ಥವಾಗುವ ರೀತಿಯಲ್ಲಿ ಹಲವು ಸಂಗೀತ ಸಲಕರಣೆಗಳ ಮೂಲಕ ರಾತ್ರಿ ಪೂರ್ತಿ ಹಾಡುತ್ತಾರೆ.ಈ ರೀತಿಯ ಹಾಡುಗಾರಿಕೆ ಅಥವಾ ಖವಾಲಿಯನ್ನು ಆಲಿಸುವ ಭಕ್ತಾದಿಗಳಿಗೆ ಒಳ್ಳೆಯದಾಗುತ್ತದೆ.ಎಂಬ

ನಂಬಿಕೆಯುಳ್ಳ ಭಕ್ತಾದಿಗಳು ರಾತ್ರಿ ಪೂರ್ಣ ಖವಾಲಿ ಕೇಳುವ ಮುಖಾಂತರ ವಲೀಯವರನ್ನು ನೆನೆಯುತ್ತಾರೆ.ಹೀಗೆ ವರ್ಷದಿಂದ ವರ್ಷಕ್ಕೆ ಬಹಳ ವೈಭವಗಳಿಂದ ಈ ವಲೀಗಳ ಉರುಸ್‌ನ್ನು ಕನಕಪುರ ಪಟ್ಟಣದಲ್ಲಿ ಆಚರಿಸಲಾಗುತ್ತದೆ.

ಈ ವಲೀಗಳ ಉರುಸ್ ಆಚರಣೆಯಲ್ಲಿ ಯಾವುದೇ ಸಮುದಾಯದ ಹಂಗಿಲ್ಲದೆ ಎಲ್ಲಾ ಸಮುದಾಯದ ಜನರು ಉರುಸ್‌ನಲ್ಲಿ ಪಾಲ್ಗೊಂಡು ತಮ್ಮ ಹರಕೆಗಳನ್ನು ಸಲ್ಲಿಸುತ್ತಾರೆ.

**ಈ ದರ್ಗಾದ ಐತಿಹ್ಯಗಳು**

ಹಜರತ್ ದೀದಾರ್ ಅಲಿಷಾ ಚಷತಿ. ಅಥವಾ ಮವಾರುಫ್ ಕಮಲಿ ಪೀರ್ ಬಾಬಾ ರವರು ಜೀವಿತಾವಧಿಯಲ್ಲಿ ಹಲವು ಪವಾಡಗಳನ್ನು ಮಾಡುವ ಮುಖಾಂತರ ಪವಾಡ ಪುರುಷ ಎಂದು ಹೆಸರುವಾಸಿಯಾಗಿದ್ದರು.ಯಾವುದೇ ಆಸ್ಪತ್ರೆಯಲ್ಲಿ ಗುಣಮುಖವಾಗದಂತಹ ಖಾಯಿಲೆಗಳನ್ನು ಈ ವಲೀಯವರು ಗುಣಪಡಿಸುತ್ತಿದ್ದರು. ಹಾಗೂ ಕಷ್ಟದಲ್ಲಿರುವ ದೀನ-ದಲಿತರಿಗೆ ಸಹಾಯ ಮಾಡುತ್ತಿದ್ದರು. ಇನ್ನು ಕೆಲವು ಭಕ್ತರಿಗೆ ಕನಸಿನಲ್ಲಿ ಹೋಗಿ ಮಾಡಬೇಕಾದ ಕಾರ್ಯದ ಬಗ್ಗೆ ಸೂಚಿಸುತ್ತಿದ್ದರು ಎಂದು ಜನರು ಹೇಳುತ್ತಾರೆ.

ಮತ್ತೊಂದು ಐತಿಹ್ಯದ ಪ್ರಕಾರ ದೆವ್ವ -ಪಿಶಾಚಿಯ ಪ್ರಭಾವವಾಗಿದ್ದಾಗ ಅವರುಗಳು ಆ ಹೆಣ್ಣನ್ನು ಕಾಪಾಡಿಕೊಳ್ಳಲು ವೈಜ್ಞಾನಿಕವಾದ ಔಷಧೋಪಚಾರಗಳನ್ನು ಮತ್ತು ಮನೋ ವೈದ್ಯರನ್ನು ಸಂಪರ್ಕಿಸಿದರೂ ಯಾವುದೇ ಪ್ರಯೋಜನವಿಲ್ಲದೆ, ವೈದ್ಯರು ಅಸಹಾಯಕ ಸ್ಥಿತಿಯಲ್ಲಿದ್ದಾಗ ಯಾರೊಬ್ಬರು ಈ ವಲೀಯ ಪವಾಡವನ್ನು ತಿಳಿಸಿ, ಈ ವಲೀಯ ಉರುಸ್ ಸಂದರ್ಭದಲ್ಲಿ ಅಥವಾ ಅಮವಾಸ್ಯೆಯ ದಿನದಂದು ದರ್ಗಾಕ್ಕೆ ಭೇಟಿ ನೀಡಿ ನಿಮ್ಮ ಮಗಳ ತೊಂದರೆಗಳು ನಿವಾರಣೆಯಾಗುತ್ತವೆ. ಎಂದು ಹೇಳಿದ್ದಾರಂತೆ, ಅದೇ ರೀತಿ ಅವರು ಈ ದರ್ಗಾದ ಉರುಸ್‌ನ ಸಂದರ್ಭದಲ್ಲಿ ಭೇಟಿ ಕೊಟ್ಟಾಗ ಆ ಹೆಣ್ಣು ಮಗಳಲ್ಲಿ ಇದ್ದಂತಹ ತೊಂದರೆಗಳು ನಿವಾರಣೆಯಾಗಿ ಹಂತ-ಹಂತವಾಗಿ ಸುಧಾರಣೆಯನ್ನು ಕಂಡು ಕೊಂಡ ಹೆಣ್ಣು ಮಗಳು ಒಂದು ವಾರದಲ್ಲಿ ಮೊದಲಿನಂತಾದಳು ಎಂದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ವಕ್ತೃಗಳು ತಿಳಿಸುತ್ತಾರೆ. ಹೀಗೆ ನಾನಾ ಮಾನಸಿಕ ತೊಂದರೆಗಳಿಗೆ ಒಳಗಾದವರು, ಅನಾರೋಗ್ಯಕ್ಕೆ ತುತ್ತಾದವರು, ಈ ವಲೀಯ ಸನ್ನಿಧಿಗೆ ಬಂದರೆ ಅವರ ಸಂಕಷ್ಟಗಳು ದೂರವಾಗುತ್ತವೆ. ಎಂಬ ಗಾಢವಾದ ನಂಬಿಕೆ ಇಲ್ಲಿದೆ.ಬರುವ ಭಕ್ತಾದಿಗಳು ಹೀಗೆ ವ್ಯಕ್ತಪಡಿಸುತ್ತಾರೆ. ಹೀಗೆ ಏನೇ ಐತಿಹ್ಯಗಳಿದ್ದರೂ ನಂಬಬಹುದು ನಂಬಲು ಅಸಾಧ್ಯವಾಗಿರಬಹುದು. ಆದರೆ ಇಲ್ಲಿಗೆ ಭೇಟಿಕೊಡುವ ಭಕ್ತಾದಿಗಳೆಲ್ಲರ ಸಂಕಷ್ಟಗಳು ನಿವಾರಣೆಯಾಗಿರುವುದು.ಸತ್ಯಕ್ಕೆ ಹತ್ತಿರವಾದ ಘಟನೆಗಳಾಗಿವೆ.

## ಯಾಕುಬ್ ಅಲಿ ಷಾ ದರ್ಗಾ

ಯಾಕುಬ್ ಅಲಿ ಷಾ ದರ್ಗಾವು ಕನಕಪುರ ಪಟ್ಟಣದ ಪಶ್ಚಿಮ ದಿಕ್ಕಿನ ಕನಕಪುರ ಸಂಗಮ ಮುಖ್ಯರಸ್ತೆಯಲ್ಲಿರುವ ವಿದ್ಯುತ್ ಸರಬರಾಜು ಕೇಂದ್ರದ ಪಕ್ಕದಲ್ಲಿರುವ ದರ್ಗಾ. ಕನಕಪುರ ಬಸ್ ನಿಲ್ದಾಣದಿಂದ 1 ಕಿ.ಮೀ ಅಂತರದಲ್ಲಿರುವಂತಹ ಕುರುಪೇಟೆಯಲ್ಲಿ ಈ ದರ್ಗಾವಿದೆ. ಈ ದರ್ಗಾವು ಸುಮಾರು 150 ವರ್ಷಗಳ ಹಿಂದಿನದ್ದು ಎಂದು ನಂಬಲಾಗಿದೆ.ಈ ದರ್ಗಾದಲ್ಲಿರುವಂತಹ ವಲೀಯವರನ್ನು ಯಾಕುಬ್ ಅಲಿ ಷಾ ವಲೀಗಳು ಎಂದು ಕರೆಯುತ್ತಾರೆ.ಯಾಕುಬ್ ಅಲಿ ಷಾ ಉರುಸ್ ಶಾಬಾನ್ ತಿಂಗಳಿನಲ್ಲಿ ನಡೆಯುತ್ತದೆ.ಇಲ್ಲಿಯು ಕೂಡ ಬಹಳ ವೈಭವದಿಂದ ಉರುಸ್‌ನ್ನು ಆಚರಿಸಲಾಗುತ್ತದೆ.ಉರುಸ್‌ನ ಸಂದರ್ಭದಲ್ಲಿ ಕನಕಪುರ ತಾಲ್ಲೂಕಿನ ಸುತ್ತ–ಮುತ್ತಲಿನ ಹಳ್ಳಿ, ಗ್ರಾಮ, ಪಟ್ಟಣ, ತಾಲ್ಲೂಕು, ಜಿಲ್ಲೆಗಳಿಂದ ಈ 'ವಲೀ'ರವರ ದರಬಾರ್‌ನಲ್ಲಿ ಪಾಲ್ಗೊಳ್ಳುವರು.ಹೀಗೆ ಉತ್ಸವದಲ್ಲಿ ಭಾಗವಹಿಸುವ ಭಕ್ತಾದಿಗಳು ತಾವು ಮೊದಲು ದರ್ಶನಕ್ಕೆ ಭೇಟಿ ಕೊಟ್ಟಾಗ ಮಾಡಿಕೊಂಡ ವಿಷಯಗಳು ಈಡೇರಿದರೆ 'ವಲೀ'ರವರಲ್ಲಿ ಹರಕೆಗಳನ್ನು ಮಾಡಿಕೊಂಡು ತೀರಿಸುತ್ತಾರೆ.ಉರುಸ್ ಸಂದರ್ಭದಲ್ಲಿಯೇ ತೀರಿಸಬೇಕೆಂದೇನಿಲ್ಲ. ಭಕ್ತಾದಿಗಳ ಅನುಕೂಲಕ್ಕೆ ಅನುಗುಣವಾಗಿ ದರ್ಗಾಕ್ಕೆ ಭೇಟಿಕೊಡುತ್ತಾರೆ.ಅದರಲ್ಲಿಯು ಈ ದರ್ಗಾಕ್ಕೆ ಶುಕ್ರವಾರ ಮತ್ತು ಭಾನುವಾರದಂದು ಹೆಚ್ಚಿನ ಭಕ್ತಾದಿಗಳು ಬಂದು ಹರಕೆಗಳನ್ನು ತೀರಿಸುವುದು ಮತ್ತು ಹರಕೆಗಳನ್ನು ಮಾಡಿಕೊಳ್ಳುವುದು ಕಂಡುಬರುತ್ತದೆ.ಈ ದರ್ಗಾದ ಉರುಸ್ ಸುಮಾರು 70 ವರ್ಷಗಳಿಂದ ನಡೆಯುತ್ತ ಬಂದಿದೆ.ಎಂದು ಅಲ್ಲಿಗೆ ಬರುವ ಭಕ್ತಾದಿಗಳು ಮತ್ತು ದರ್ಗಾದಲ್ಲಿ ಇರುವ ಫಕೀರರು ತಿಳಿಸುತ್ತಾರೆ.

ಈ ದರ್ಗಾದಲ್ಲಿಯು ಉರುಸ್‌ನ ದಿನ ಎಲ್ಲಾ ರೀತಿಯ ಆಚರಣೆಗಳು ನಡೆಯುತ್ತವೆ. ಗಂಧರ್ ಹತ್ತಿಸುವುದು, ಹೂವಿನ ಚಾದರ ಹಾಕುವುದು.ಕೆಂಪು, ಹಳದಿ, ಹಸಿರು ಬಟ್ಟೆಯ ಮೇಲೆ ಅಲಂಕಾರಿಕ ಬಟ್ಟೆಗಳು ಮತ್ತು ಹಲವು ಸುನೇರಿಯಿಂದ ಮಾಡಿದ ಅಲಂಕಾರದ ಚಾದರ್‌ನ್ನು ಹಾಕಲಾಗುವುದು. ಹಾಗೆಯೇ ಅಲ್ಲಿಗೆ ಬಂದ ಭಕ್ತಾದಿಗಳಿಗೆ ಊಟದ ವ್ಯವಸ್ಥೆ ಮಾಡಲಾಗುತ್ತದೆ. ಈ ಊಟದ ವ್ಯವಸ್ಥೆಯು ಒಂದು ಸಾವಿರದಿಂದ ಒಂದುವರೇ ಸಾವಿರ ಭಕ್ತಾದಿಗಳು ಭೋಜನವನ್ನು ಸ್ವೀಕರಿಸುತ್ತಾರೆ.ಈ ರೀತಿಯ ವ್ಯವಸ್ಥೆಯಲ್ಲಿ ಪುರುಷರು ಮತ್ತು ಮಹಿಳೆಯರಿಗೆ ಪ್ರತ್ಯೇಕ ವ್ಯವಸ್ಥೆ ಮಾಡಿರುತ್ತಾರೆ.ಈ ದರ್ಗಾದ ಭೇಟಿ ಅಥವಾ ಉರುಸ್‌ಗೆ ಭಾಗವಹಿಸಬೇಕಾದರೆ ಬರುವ ಭಕ್ತಾದಿಗಳೆಲ್ಲರು ತಪ್ಪದೇ ಮಡಿವಂತಿಕೆಯಿಂದ ಬರಬೇಕು.ಯಾವುದೇ ರೀತಿಯ ಶಾರೀರಿಕ ಸ್ವಚ್ಛತೆಯನ್ನು ಕಳೆದುಕೊಂಡಿದ್ದರೆ ಅಂತಹವರು ದರ್ಗಾದ ಒಳಗೆ ಪ್ರವೇಶವಿಲ್ಲ.

ದರ್ಗಾದ ಭೇಟಿಗೆ ಬರಬಾರದೆಂದು ನಂಬಲಾಗಿದೆ.ಒಂದು ವೇಳೆ ಬಂದರೆ ಅವರ ಕಷ್ಟಗಳು ನಿವಾರಣೆಯಾಗದೆ ಹೆಚ್ಚಾಗುತ್ತವೆ. ಎಂದು ಅಲ್ಲಿನ ಮುರ್ಷದ್ ತಿಳಿಸುತ್ತಾರೆ.

**ಈ ದರ್ಗಾದ ಐತಿಹ್ಯಗಳು**

ಯಾಕುಬ್ ಅಲಿ ಷಾ 'ವಲೀ'ರವರು ಪವಾಡ ಪುರುಷರು ಇವರ ಜೀವಿತಾವಧಿಯಲ್ಲಿ ಹಲವು ಪವಾಡಗಳನ್ನು ಮಾಡಿದ್ದಾರೆ. ಹಾಗೂ ಜನರ ಸಂಕಷ್ಟಗಳನ್ನು ನಿವಾರಣೆ ಮಾಡುವುದರ ಮೂಲಕ ಯಾವುದೇ ಜಾತಿ, ಧರ್ಮ, ಮತಗಳ ಭೇದವಿಲ್ಲದೇ ಎಲ್ಲಾ ಸಮುದಾಯದವರನ್ನು ಪ್ರೀತಿ, ವಿಶ್ವಾಸದಿಂದ ಗೌರವಿಸಿ ಅವರ ಕಷ್ಟಗಳನ್ನು ನಿವಾರಿಸುತ್ತಿದ್ದರು. ಎಂದು ಐತಿಹ್ಯಗಳಿವೆ. ಮತ್ತೊಂದು ಐತಿಹ್ಯದ ಪ್ರಕಾರ ಮದುವೆಯಾಗದೆ ವಯಸ್ಸು ಮೀರುತ್ತಿರುವ ಗಂಡು ಮತ್ತು ಹೆಣ್ಣುಗಳು ಈ ವಲೀಯವರ ಸಮಾಧಿಗೆ ಭೇಟಿ ನೀಡಿ ದರ್ಗಾ ಮತ್ತು ಸಮಾಧಿಯ ಸುತ್ತ ಮೂರು ಸುತ್ತು ಸುತ್ತಿ ಮಹಬೂಬ್ ಶಭಾನಿಯ ಧ್ವಜಸ್ತಂಭದ ಹತ್ತಿರ ಗಂಧದ ಕಡ್ಡಿಯನ್ನು ಹತ್ತಿಸಿ ಹರಕೆಮಾಡಿಕೊಂಡರೆ ಬಹಳ ಬೇಗ ಹರಕೆ ಮಾಡಿಕೊಂಡವರ ಮದುವೆಯಾಗುತ್ತದೆ. ಎಂದು ನಂಬಲಾಗಿದೆ.

ಮತ್ತೊಂದು ಐತಿಹ್ಯದ ಪ್ರಕಾರ ಮದುವೆಯಾಗಿ ಎರಡು-ಮೂರು-ನಾಲ್ಕು ವರ್ಷಗಳಾಗಿದ್ದರೂ ಮಕ್ಕಳೇ ಆಗದಿರುವ ದಂಪತಿಗಳು ಈ ದರ್ಗಾಕ್ಕೆ ಬಂದು ಹರಕೆ ಮಾಡಿಕೊಂಡು ವಾರದ ಪ್ರತಿ ಶುಕ್ರವಾರ ದರ್ಗಾಕ್ಕೆ ಭೇಟಿಕೊಟ್ಟು, ಫಾತೇಹ ಓದಿಸಬೇಕು. ಹೀಗೆ ಐದು ವಾರಗಳು ಭೇಟಿಕೊಟ್ಟರೆ ಮಕ್ಕಳ ಭಾಗ್ಯ ದೊರೆಯುವುದು ಎಂದು ನಂಬಲಾಗಿದೆ.ಅದೇ ರೀತಿ ಶಾರೀರಿಕ ಕಾಯಿಲೆಗಳಿದ್ದರೂ ಸಹ ಈ ದರ್ಗಾಕ್ಕೆ ಭೇಟಿ ನೀಡುವುದರಿಂದ ನಿವಾರಣೆಯಾಗುತ್ತದೆ.ಎಂದು ಇಲ್ಲಿಗೆ ಬರುವ ಭಕ್ತಾದಿಗಳು ನಂಬಿದ್ದಾರೆ.ಈ ದರ್ಗಾದ ವಲೀಯವರ ಬಗ್ಗೆ ಅನುಮಾನ ಪಟ್ಟಿದ್ದಕ್ಕೆ 'ವಲೀ' ರವರಲ್ಲಿ ಕ್ಷಮೆ ಕೇಳಬೇಕೆಂದು ಹೇಳುತ್ತಾರೆ.ಹೀಗೆ ಅನೇಕ ರೀತಿಯ ದಂತಕಥೆಗಳನ್ನೊಳಗೊಂಡ ಈ ದರ್ಗಾವು ಜನಪದ ಸಾಂಸ್ಕೃತಿಕ ಹಿನ್ನೆಲೆಯನ್ನು ಒಳಗೊಂಡು ಸಂಸ್ಕೃತಿಯ ಅನಾವರಣವನ್ನು ಮಾಡಿಕೊಡುತ್ತದೆ.

**ಖಾನ್ ಖಾನ್ ಬಹದೂರ್ ದರ್ಗಾ**

ಖಾನ್ ಖಾನ್ ಬಹದೂರ್ ದರ್ಗಾವು ಕನಕಪುರದ ಪಶ್ಚಿಮ ದಿಕ್ಕಿನ ಕನಕಪುರ, ಮೈಸೂರು ಹೆದ್ದಾರಿಯಲ್ಲಿ ಇದೆ.ಇದು ಕನಕಪುರ ವಾಣಿ ಚಿತ್ರಮಂದಿರ ಹತ್ತಿರವಿದೆ.ಈ ದರ್ಗಾವು ಸುಮಾರು 100 ವರ್ಷಗಳ ಹಿಂದಿನದ್ದು ಎಂದು ನಂಬಲಾಗಿದೆ.ಈ ದರ್ಗಾದಲ್ಲಿರುವ 'ವಲೀ'ಯವರನ್ನು ಖಾನ್ ಖಾನ್ ಬಹದೂರ್ 'ವಲೀ'ಯವರ ದರ್ಗಾ ಎಂದು ನಾಮಕರಣ

ಮಡಲಾಗಿತ್ತು.ಇನ್ನು ಕೆಲವರು ಈ ದರ್ಗಾವನ್ನು ಖಾನ್ ಖಾನ್ ಬಹದ್ದೂರ್ ದರ್ಬಾರ್ ಎಂದು ಸಹ ಕರೆಯುತ್ತಾರೆ.ಖಾನ್ ಖಾನ್ ಬಹದ್ದೂರ್ 'ವಲೀ'ಯವರ ಉರುಸ್ ಸಫರ್ ತಿಂಗಳ ಕೊನೆಯ ವಾರದಲ್ಲಿ ಗಂಧ ಹತ್ತಿಸಲಾಗುತ್ತದೆ.

ಈ ಸಂದರ್ಭದಲ್ಲಿ ಒಂದುವರೆ ಸಾವಿರದಿಂದ ಒಂದು ಸಾವಿರದ ಎಂಟು ನೂರು ಭಕ್ತಾದಿಗಳು ಈ ಉತ್ಸವಗಲ್ಲಿ ಪಾಲ್ಗೊಳ್ಳುತ್ತಾರೆ.ಈ ಉತ್ಸವಕ್ಕೆ ಕನಕಪುರ ಪಟ್ಟಣ ಮತ್ತು ಕನಕಕಪುರದ ಸುತ್ತ-ಮುತ್ತಲಿನ ಹಳ್ಳಿ ಹಾಗೂ ಪಟ್ಟಣ ಜಿಲ್ಲೆಗಳಿಂದ ಬರುತ್ತಾರೆ.ಬರುವ ಭಕ್ತಿಗಳು ಉರುಸ್ ನಡೆಯುವ ಮೊದಲ ದಿನವೇ ಕೆಲವರು ಬಂದರೆ ಇನ್ನು ಕೆಲವರು ಉರುಸ್ ದಿನದ ಬೆಳಿಗ್ಗೆಯಿಂದ ರಾತ್ರಿಯವರೆಗೆ ಬರುತ್ತಲೇ ಇರುತ್ತಾರೆ.ಕೆಲವರು ದರ್ಗಾಕ್ಕೆ ಬಂದು "ವಲೀ' ರವರ ಸಮಾಧಿಯ ಮಜಾರ್‌ನ ದರ್ಶನ ಪಡೆದು ಯಾವುದಾದರೂ ಹರಕೆಗಳಿದ್ದಲ್ಲಿ ಅವುಗಳನ್ನು ಈಡೇರಿಸುತ್ತಾರೆ.ಹರಕೆ ಮಾಡಿಕೊಂಡಾಗ ದರ್ಗಾಕ್ಕೆ ನೀಡುವ ಸಹಾಯ ಮತ್ತು ಹಣ ಹೀಗೆ ಏನಾದರೂ "ನ್ಯಾಜ್" ಮಾಡಿಕೊಂಡಿದ್ದಾರೆ.ಅವುಗಳನ್ನು ಪೂರೈಸಿ ಹಿಂದಿರುಗುತ್ತಾರೆ.

ಇನ್ನು ಕೆಲವರು "ವಲೀ"ರವರ ಉತ್ಸಾಹದಲ್ಲಿ ಭಾಗವಹಿಸಿ ಅಲ್ಲಿನ ಸಣ್ಣ-ಪುಟ್ಟ ಕೆಲಸಗಳಿಗೆ ಸಹಕಾರ ನೀಡುವ ಮೂಲಕ ರಾತ್ರಿ ಇಡೀ ದರ್ಗಾದ ಹತ್ತಿರವೇ ಉಳಿದು ಇಡೀ ರಾತ್ರಿ ನಡೆಯುವ ಖವಾಲಿ ಗಾಯನವನ್ನು ಕೇಳಿ ವಲೀ ಮತ್ತು ಅಲ್ಲಾನ ಧ್ಯಾನದಲ್ಲಿ ತಲ್ಲೀನವಾಗುತ್ತಾರೆ.ಹೀಗೆ ರಾತ್ರಿ ಇಡೀ ನಡೆಯುವ ದರ್ಗಾದ ಉತ್ಸವ ಒಂದಲ್ಲ ಒಂದು ಸಾಂಸ್ಕೃತಿಕ ಕಾರ್ಯಕ್ರಮ ಮತ್ತು ನಂಬಿಕೆಯ ಆಚರಣೆಗಳಿಂದ ಖಾನ್ ಖಾನ್ ಬಹದ್ದೂರ್ ದರ್ಗಾ ಆ ದಿನ ಬಹಳ ವೈಭವಗಳಿಂದ ದೀಪಲಂಕಾರಗಳಿಂದ ಹಬ್ಬದ ಆಚರಣೆಯ ರೀತಿಯಲ್ಲಿ ನಡೆಯುವುದು.ಮುಸ್ಲಿಂ ಮತ್ತು ಹಿಂದು ಸಾಂಸ್ಕೃತಿಕ ವೈಭವೀಕರಣದಂತೆ ಕಂಗೊಳಿಸುತ್ತಿರುತ್ತದೆ. ಹೀಗೆ ದರ್ಗಾದ ಉರುಸ್ 60 ವರ್ಷಗಳಿಂದ ನಡೆಯುತ್ತಾ ಬಂದಿರುವುದು.ಆ ದರ್ಗಾಕ್ಕೆ ಬಂದ ಭಕ್ತಾದಿಗಳಿಂದ ತಿಳಿದು ಬರುತ್ತದೆ.

**ಈ ದರ್ಗಾದ ಐತಿಹ್ಯಗಳು**

ಖಾನ್ ಖಾನ್ ಬಹದ್ದೂರ್ "ವಲೀ" ರವರ ಬಗ್ಗೆ ಅನೇಕ ಪವಾಡಗಳು ಮತ್ತು ನಂಬಿಕೆಗಳು ಜನಪದರಲ್ಲಿ ಉಳಿದುಕೊಂಡಿವೆ. ಅವುಗಳಲ್ಲಿ ಪ್ರಮುಖವಾಗಿ ಜನಪದದ ನಂಬಿಕೆಯಂತೆ ಈ ವಲೀ ರವರು ಯಾರು ಇವರನ್ನು ಮನಪೂರ್ವಕವಾಗಿ ಭಕ್ತಿಯಿಂದ ನನೆಯುತ್ತಾರೋ ಅವರಿಗೆ ಅವರ ಕಷ್ಟಗಳು ನಿವಾರಣೆಯ ಸೂಚನೆಯನ್ನು ಅವರಿಗೆ ಗೋಚರಿಸುವ ಹಾಗೆ ವಲೀರವರ ಆಶೀರ್ವಾದದಿಂದ ನಡೆಯುತ್ತವೆ. ಎಂದು ಅಲ್ಲಿಗೆ ಬಂದು

ಭಕ್ತಾದಿಳು ತಿಳಿಸುತ್ತಾರೆ. ಮತ್ತೊಂದು ಐತಿಹ್ಯ ಪ್ರಕಾರ ಯಾವ ಸಮುದಾಯದವರಾಗಲಿ ಅವರು ತಮ್ಮ ದೇಹ ಮತ್ತು ಮನಸ್ಸನ್ನು ಸ್ವಚ್ಚವಾಗಿರಿಸಿಕೊಂಡು ಅವರನ್ನು ಮನಸ್ಸಿನಲ್ಲಿಯೇ ನೆನೆಯುತ್ತಾ ಮಲಗಿಕೊಂಡರೆ, ಅವರ ಕನಸಿನಲ್ಲಿ ಬಂದು, ಸಮಸ್ಯೆಗಳಿಗೆ ಪರಿಹಾರ ಮತ್ತು ಮುಂದೆ ನಡೆಯಲಿರುವ ಘಟನೆಗಳು ಆ ಪಟ್ಟಣಗಳಿಂದ ವಿಮುಕ್ತಿಯಾಗಲು ಕೈಗೊಳ್ಳಬೇಕಾದ ಮಾರ್ಗಗಳನ್ನು ಕನಸಿನಲ್ಲಿ ಬಂದು ತಿಳಿಸಿ ಹೋಗುತ್ತಾರೆ. ಎಂಬ ಗಾಢವಾದ ನಂಬಿಕೆ.

ಇಲ್ಲಿಗೆ ಬರುವ ಭಕ್ತಾದಿಗಳಲ್ಲಿ ಇರುವುದು ಕಂಡು ಬರುತ್ತದೆ.ಇಂತಹ ಅನೇಕ ನಂಬಿಕೆಗಳನ್ನು ಈ "ವಲೀ" ರವರ ಮೇಲೆ ಜನಪಧರಲ್ಲಿ ಹರಿದಾಡುತ್ತಿದೆ.ಇಂತಹ ಪವಾಡಗಳು ನಂಬಿಕೆಗಳು ನಿಜವಾಗಿರುವುದನ್ನು, ಮತ್ತು ತಮ್ಮ ಅನುಭವಗಳನ್ನು ಭಕ್ತಾದಿಗಳು ಬಹಳ ಭಯಭಕ್ತಿಯಿಂದ "ವಲೀ"ರವರ ಬಗೆ ತಿಳಿಸುತ್ತಾರೆ.

**ಕೌಸರ್ ಅಲಿಷಾ**

ಕೌಸರ್ ಅಲಿ ಷಾ "ವಲೀ"ರವರ ದರ್ಗಾವು ಕನಕಪುರದಲ್ಲಿರುವ ಮುಸ್ಲಿಂ ಸಮುದಾಯದವರ ಪ್ರಾರ್ಥನಾ ಸ್ಥಳವಾದ ಈದ್ಗಾ ಮೊಹಲ್ಲಾ ಹತ್ತಿರವಿರುವ ಜಾಮೂನ್ ಕಟ್ಟೆಯಲ್ಲಿದೆ. ಕನಕಪುರ ಬಸ್ ನಿಲ್ದಾಣದಿಂದ ಈ ದರ್ಗಾಕ್ಕೆ 1.5 ಕಿ.ಮೀ ಅಂತರದಲ್ಲಿದೆ. ಕೌಸರ್ ಅಲಿ ಷಾ "ವಲೀ" ರವರ ದರ್ಗಾವು ಸುಮಾರು 100 ವರ್ಷಗಳ ಹಿಂದಿನಿಂದಲೂ ಇದೆ ಎಂದು ನಂಬಲಾಗಿದೆ.ಇವರ ಮೂಲದ ಬಗ್ಗೆ ಅನೇಕ ಕಥೆಗಳು ಇವೆ. ಇವುಗಳಲ್ಲಿ ನಿಖರವಾಗಿ ಇವರ ಮೂಲದ ಬಗ್ಗೆ ತಿಳಿದು ಬಂದಿಲ್ಲ. ಇವರು ಕನಕಪುರ ಪಟ್ಟಣದವರೇ ಎಂದು ಕೆಲವರು ಹೇಳಿದ್ದರೆ, ಇನ್ನು ಕೆಲವರು ಇವರು ಫಕೀರರಾಗಿ ಉತ್ತರದಿಂದ ದಕ್ಷಿಣಕ್ಕೆ ಬಂದವರೆಂದಲೂ ಇನ್ನು ಕೆಲವರು ಇವರು ಅಜ್ಮೀರ್‌ನಿಂದ ಬಂದಿದ್ದರು ಎಂದು ಹೇಳುತ್ತಾರೆ.ಇವರ ಮೂಲದ ಬಗ್ಗೆ ಸರಿಯಾದ ಮಾಹಿತಿ ದೊರೆಯದಿದ್ದರೂ ಬಹುತೇಕರು ಹೇಳುವ ಹಾಗೆ ಇವರು "ಅಜ್ಮೀರ್" ನಿಂದ ಬಂದು ಇಲ್ಲಿ ನೆಲೆ ನಿಂತವರು.ನಿಂತು ಇಲ್ಲಿನ ಜನರ ಕಷ್ಟ ಸುಖಗಳಲ್ಲಿ ಭಾಗಿಯಾಗಿ ಅವರ ನೋವುಗಳನ್ನು ನಿವಾರಣೆ ಮಾಡಿದವರು ಎಂದು ನಂಬಲಾಗಿದೆ.ಈ ವಲೀರವರ ಉರುಸ್ 60 ವರ್ಷದಿಂದ ನಡೆಯುತ್ತಾ ಬಂದಿದೆ.ಪ್ರತಿ ವರ್ಷ ರಜಬ್‌ನ ಕೊನೆಯ ದಿನಗಳಲ್ಲಿ "ವಲೀ"ಯವರ ಅನುಮತಿಯ ಮೇರೆಗೆ ಅವರು ಸೂಚಿಸಿದ ದಿನದಂದು ಉರುಸ್ ಉತ್ಸವ ಮಾಡಲಾಗುವುದು ಈ ಉತ್ಸವದಲ್ಲಿ ಒಂದು ಸಾವಿರಕ್ಕೂ ಮೇಲ್ಪಟ್ಟ ಭಕ್ತಾದಿಗಳು ಭಾಗವಹಿಸುವರು.ಇವರ ಜೊತೆ ಪಟ್ಟಣದ ಮತ್ತು ಸುತ್ತ-ಮುತ್ತಲಿನ ದರ್ಗಾಗಳ "ಮುರ್ಷದ್"ಗಳು ಫಕೀರರು ಭಾಗವಹಿಸುವರು.ಎಲ್ಲಾ ದರ್ಗಾಗಳಂತೆ ಈ ದರ್ಗಾದಲ್ಲಿಯು

ಗಂಧ ಏರಿಲಾಗುವುದು.ಇದರ ಜೊತೆಗೆ ಹೂವಿನ ಮತ್ತು ಹಸಿರು "ವಲೀ"ರವರ ಸಮಾಧಿಯ ಮೇಲೆ ಅಲಂಕಾರಗೊಳ್ಳುವುದು. ಹೀಗೆ ಉತ್ಸವ ನಡೆಯುತ್ತದೆ ಉತ್ಸವ ದಿನ ಉತ್ಸವಕ್ಕೆ ಬಂದ ಭಕ್ತಾದಿಗಳಿಗೆ ಊಟದ ವ್ಯವಸ್ಥೆ ಮಾಡಲಾಗುವುದು.ಇದರಲ್ಲಿ ಆ ಪ್ರದೇಶದ ಎಲ್ಲಾ ಹಿರಿಯರು, ಯುವಕರು ಮತ್ತು ಹಿರಿಯ ಮಹಿಳೆಯರು ಕೆಲಸಗಳಲ್ಲಿ ಪಾಲ್ಗೊಂಡು "ವಲೀ" ರವರ ಉತ್ಸವ ಸುಗಮವಾಗಿ ನಡೆಯುವಂತೆ ನೋಡಿಕೊಳ್ಳುವರು.

**ವಲೀರವರ ಮೇಲೆ ಇರುವ ಐತಿಹ್ಯ**

ಈ ವಲೀರವರು ಮಹಮ್ಮದ್ ಪೈಗಂಬರ್ ರವರ ಆದರ್ಶಗಳನ್ನು ಸಾಮಾನ್ಯರಿಗೆ ತಿಳಿಸಿ ಅಲ್ಹಾನ ಮಹತ್ವವನ್ನು ತಿಳಿಸಿಕೊಡುವ ಮೂಲಕ ವಲೀ ಅಲ್ಲಾನಾದ ಅಲ್ಹಾನು ತಿಳಿಸಿರುವ ಸಂದೇಶಗಳನ್ನು ಪ್ರಚಾರ ಮಾಡಿದಂತಹ ಫಕೀರ ಎಂದು ಹೇಳಲಾಗುತ್ತದೆ.ಯಾವುದೇ ಜಾತಿ ಭೇದವಿಲ್ಲದೆ ಒಂದೇ ಮನಸ್ಸಿನಿಂದ ಬರುವಂತಹ ಭಕ್ತರಿಗೆ ನಿಜವಾಗಿಯೂ "ವಲೀ" ರವರು ಒಳ್ಳೆಯದನ್ನು ಮಾಡಿ ಅವರ ನೆಮ್ಮದಿಗೆ ಹಾಗೂ ಅವರ ಕುಟುಂಬದ ಸದಸ್ಯರನ್ನು ರಕ್ಷಿಸುತ್ತಾರೆ.ಎಂದು ಭಕ್ತಾದಿಗಳು ಹೇಳುತ್ತಾರೆ.

ಮತ್ತೊಂದು ಐತಿಹ್ಯದ ಪ್ರಕಾರ ಈ ವಲೀಯವರ ದರ್ಬಾರ್‌ಗೆ ಬಂದವರ ಕಷ್ಟಗಳು ಮಾಯವಾಗಿ ನೆಮ್ಮದಿಯನ್ನು ಪಡೆಯುತ್ತಾರೆ. ವ್ಯವಸಾಯ, ವ್ಯವಹಾರ, ಆಸ್ತಿ ಹಣ ಕುಟುಂಬ ಕಲಹಗಳು, ಗಂಡ ಹೆಂಡತಿ ಕಲಹ, ಮಕ್ಕಳಾಗದಿದ್ದವರ ಸಮಸ್ಯೆ, ದೇಹದ ಅನೇಕ ನೋವುಗಳು ಮಕ್ಕಳಿಗೆ ಬರುವ ಮಕ್ಕಳ ಖಾಯಿಲೆಗಳ ಪರಿಹಾರವನ್ನು ಸೂಚಿಸಿ ಅವೆರ ಅನುಗ್ರಹದಿಂದ ನಿವಾರಣೆಯಾಗುತ್ತವೆ. ಎಂದು ಇಲ್ಲಿಗೆ ಬರುವ ಭಕ್ತಾದಿಗಳು ನಂಬಿದ್ದಾರೆ.ಮತ್ತೊಂದು ಜನಪದ ಕಥೆಯ ಪ್ರಕಾರ ಈ ವಲೀರವರ ಹತ್ತಿರ ಬರುವ ಭಕ್ತಾದಿಗಳ ಸಂಕಷ್ಟಗಳನ್ನು ನಿವಾರಿಸುತ್ತಾರೆ.

ಈ ದರ್ಗಾಕ್ಕೆ ಬಂದ ಮೇಲೆ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ.ಅವುಗಳಲ್ಲಿ ಮುಖ್ಯವಾಗಿ ಮುಸ್ಲಿಂರಲ್ಲದ ಬೇರೆ ಧರ್ಮಿಯರು ಮಾಂಸ ಆಹಾರವಾದ ಹಂದಿಯ ಮಾಂಸವನ್ನು ಯಾವಾಗಲೂ ಸೇವಿಸುವಂತಿಲ್ಲ. ಆ ಮಾಂಸವನ್ನು ಸೇವಿಸಿದ ದಿನ "ವಲೀ" ಇವರನ್ನು ದೂರ ಮಾಡುತ್ತಾರೆ.ಎಂಬ ನಂಬಿಕೆಯೊಂದಿಗೆ "ವಲೀ"ರವರ ದರ್ಗಾಕ್ಕೆ ಭೇಟಿ ಕೊಟ್ಟು, ಅಲ್ಲಿ ಕೊಡುವ ತಾಯತ ಮತ್ತು ಕರಿದಾರವನ್ನು ಬಲಗೈ ಅಥವಾ ಸೊಂಟದಲ್ಲಿ ಕಟ್ಟಿಕೊಳ್ಳಬೇಕು.ಅದನ್ನು ಧರಿಸಿದ ವ್ಯಕ್ತಿ ಹಂದಿ ಮಾಂಸವನ್ನು ಸ್ವೀಕರಿಸಬಾರದು.ಸ್ವೀಕರಿಸಿದರೆ ಅವರು ಕಟ್ಟಿಕೊಂಡಿರುವ ತಾಯತ ಅಥವಾ ಕರಿದಾರದ ಶಕ್ತಿ ಕಳೆದುಕೊಳ್ಳುತ್ತದೆ.ಎಂದು ಜನಪದರು ನಂಬಿದ್ದಾರೆ.ಅದೇ ರೀತಿ ನಿಯಮವನ್ನು ಮೀರಿದವರಿಗೆ ತೊಂದರೆಗಳಾಗಿವೆ. ಎಂದು

ಅಲ್ಲಿಗೆ ಬರುವ ಭಕ್ತಾದಿಗಳು ಹೇಳುತ್ತಾರೆ. ಹೀಗೆ ಅನೇಕ ರೀತಿಯ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳನ್ನು ಹೊಂದಿರುವ ಕೌಸರ್ ಅಲಿ ಷಾ ವಲೀರವರ ದಗಾವು ಕನಕಪುರ ತಾಲ್ಲೂಕಿನಾದ್ಯಂತ ತನ್ನದೇ ಆದ ಹೆಸರು ವಾಸಿಯಿಂದ ಬೆಳೆಯುತ್ತಾ ಭಕ್ತಾದಿಗಳಿಗೆ ತನ್ನ ಕಡೆಗೆ ಸೆಳೆಯುವುದು ಕಂಡುಬರುತ್ತದೆ.

## ತುಂಗಣಿ

**ಹಜರತ್ ತುಂಗಣಿ ಸಯ್ಯದ್ ಜಲಾಲ್ ಮೊಹಿದ್ದೀನ್ ಷಾ ಖಾದ್ರಿ :-**

ಕನಕಪುರ ಬೆಂಗಳೂರು ಮುಖ್ಯರಸ್ತೆಯಲ್ಲಿರುವ ತುಂಗಣಿ ಕನಕಪುರದಿಂದ 5 ಕಿ.ಮೀ ದೂರದಲ್ಲಿದೆ. ತುಂಗಣಿಯಿಂದ ಸ್ವಲ್ಪ ದೂರ ಊರಿನ ಓಣಿಯಲ್ಲಿ ಸಾಗಿದರೆ ತೆಂಗಿನ ತೋಟದಲ್ಲಿ ದರ್ಗಾವಿದೆ.ಈ ಊರಿನ ಮೊದಲ ಹೆಸರು "ತಂಗಣಿ" ಎಂದು ಕರೆಯಲಾಗುತ್ತಿತ್ತು.ಟಿಪ್ಪು ಸುಲ್ತಾನ್ ಕಾಲದಲ್ಲಿ ಬೆಂಗಳೂರಿನಿಂದ ಮೈಸೂರಿಗೆ ಸೈನಿಕರು ಹೋಗುವ ಮಾರ್ಗವಾಗಿದ್ದು, ಈ ಮಾರ್ಗದಲ್ಲಿ ಸೈನಿಕರು ವಿಶ್ರಾಂತಿ ಪಡೆಯಲು ಈ ಪ್ರದೇಶದಲ್ಲಿ ತಂಗುತ್ತಿದ್ದರು. ಆ ಕಾರಣ ಈ ಸ್ಥಳಕ್ಕೆ ತಂಗಣಿ ಎಂದು ಹೆಸರಾಗಿದೆ.ತದನಂತರ ಈ ಊರು ತುಂಗಣಿ ಎಂದು ಕರೆಯಲ್ಪಟ್ಟಿದೆ. ಈ ತುಂಗಣಿಯಲ್ಲಿ "ಹಜರತ್ ಸೈಯದ್ ಜಲಾಲ್ಮೊಹಿದ್ದೀನ್ ಷಾ ಖಾದ್ರಿ ರಹಮತ್ತುಲ್ಲಾ ಅಲೈ" ವಲೀರವರು ಐಕ್ಯರಾಗಿ ಇಲ್ಲಿ ನೆಲೆ ನಿಂತಿದ್ದಾರೆ.ಎಂಬ ನಂಬಿಕೆಯಿಂದ ಈ ಸ್ಥಳದಲ್ಲಿ ಅವರ ಸಮಾಧಿಗೆ ದರ್ಗಾವನ್ನು ನಿರ್ಮಿಸಿದ್ದಾರೆ.ಈ ದರ್ಗಾದ ಉರುಸ್-15 ವರ್ಷಗಳಿಂದ ನಡೆಯುತ್ತಾ ಬಂದಿದೆ.ಮೊದಲು ಈ ಪ್ರದೇಶದಲ್ಲಿ ಯಾವುದೇ ದರ್ಗಾವಿರಲಿಲ್ಲ. ಕೇವಲ ಮುಸ್ಲಿಂನ ಸಮಾಧಿಯಾಗಿತ್ತು.ಟಿಪ್ಪು ಸುಲ್ತಾನರವರ ಕಾಲದಲ್ಲಿ ಜೊತೆ ತುಂಗಣಿಯಲ್ಲಿ ತಂಗಿದ್ದಾಗ ತಂಗಿದ್ದ ಸ್ಥಳದಲ್ಲಿ ಸಾವನ್ನಪ್ಪಿದ್ದಾಗಾಗ ಅಲ್ಲಿಯೇ ಇವರ ಸಮಾಧಿ ಮಾಡಿ ಸೈನಿಕರು ಹೊರಟು ಹೋಗುತ್ತಾರೆ. ಅಂದಿನಿಂದ ಅವರ ಸಮಾಧಿಯುಅಲ್ಲಿ ಬೆಳೆಯುತ್ತದೆ.ಆ ಭೂಮಿಯ ಒಡೆತನ ಹೊಂದಿದ್ದ ರೈತರು ಆ ಸಮಾಧಿಯನ್ನು ಬಿಟ್ಟು ಉಳುಮೆ ಮಾಡುತ್ತಿದ್ದರು.ತದ ನಂತರ ಇವರ ಸತ್ಯತೆಯನ್ನು ತಿಳಿದು ಫಕೀರರು ಇಲ್ಲಿಗೆ ಬಂದು., ಒಂದು ಗುಡಿಸಲನ್ನು ಕಟ್ಟಿದರು. ನಂತರ ಭಕ್ತಾದಿಗಳು ಹೆಚ್ಚಿದಂತೆ ತುಂಗಣಿ ದರ್ಗಾ ಉತ್ತಮ ರೀತಿಯ ಹಾಗೂ ಭಕ್ತಾದಿಗಳಿಗೆ ಉಳಿದುಕೊಳ್ಳುವ ವ್ಯವಸ್ಥೆಯವರೆಗೆ ಅಭಿವೃದ್ಧಿ ಹೊಂದಿದೆ.

ಈ "ವಲೀ" ರವರು ನಮ್ಮ ನೆಲದವರಲ್ಲ ಇವರು ಅರಬ್ ದೇಶದಿಂದ ಭಾರತಕ್ಕೆ ಧರ್ಮ ಪ್ರಚಾರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಬಂದವರು ಎಂಬಐತಿಹ್ಯವಿದೆ. ಇವರ ಉರುಸ್ ಮೊಹರಂ ತಿಂಗಳಿನಲ್ಲಿ ನಡೆಯುತ್ತದೆ.ಉರುಸ್‌ನನ್ನು ಮೂರು ದಿನಗಳ ಕಾಲ ನಡೆಸಲಾಗುತ್ತದೆ.ಈ

ಉತ್ಸವಕ್ಕೆ ಕೊಳ್ಳೆಗಾಲ, ಬೆಂಗಳೂರು, ಚನ್ನಪಟ್ಟಣ, ರಾಮನಗರ, ಮೈಸೂರು, ಮಂಡ್ಯ, ಮಳವಳ್ಳಿ, ಹಲಗೂರು ಹಾಗೂಕನಕಪುರದ ಸುತ್ತ-ಮುತ್ತಲಿನ ಭಕ್ತಾದಿಗಳು ಇವರ ಉತ್ಸವದಲ್ಲಿ ಪಾಲ್ಗೊಳ್ಳುತ್ತಾರೆ.ಸುಮಾರು ಮೂರು ಸಾವಿರದಿಂದ ನಾಲ್ಕು ಸಾವಿರ ಭಕ್ತಾದಿಗಳು ಆ ದಿನ ಸೇರಿ ಉತ್ತಮ ರೀತಿಯ ವ್ಯವಸ್ಥೆಗಳಿಂದ ದರ್ಗಾವನ್ನು ದೀಪಾಲಂಕಾರಗಳಿಂದ ಹೂವಿನಹಾರಗಳಿಂದ ಹೂವಿನ ಚಾದರ್ ಮತ್ತು ಹಸಿರು ಬಟ್ಟೆಯ ಚಾದರ್‌ನ್ನು ಗಂಧದೊಂದಿಗೆ ಸಮಾಧಿಗೆ ಹೊದಿಸುತ್ತಾರೆ.ಈ ಉತ್ಸವಕ್ಕೆ ಅಲ್ಲಿ ನೆರೆದಿದ್ದ ಭಕ್ತಾದಿಗಳು ಸಂತೋಷದಿಂದ ವಲೀರವರ ಆರಾಧನೆಯಲ್ಲಿ ತೊಡಗುತ್ತಾರೆ.

**ಈ ದರ್ಗಾದ ಐತಿಹ್ಯಗಳು**

ತುಂಗಣಿ ದರ್ಗಾದ ಬಗ್ಗೆ ಅನೇಕ ಐತಿಹ್ಯಗಳಿವೆ. ಈ ದರ್ಗಾದಲ್ಲಿ ಲೀನರಾಗಿರುವ 'ವಲೀ'ರವರು ಅರಬ್ ರಾಷ್ಟ್ರದಿಂದ ಬಂದು ಇಲ್ಲಿನ ಸೈನಿಕರಿಗೆ ಉಪದೇಶ ಮಾಡುತ್ತಿದ್ದರು. ಇವರು ಬಹಳ ಪವಾಡ ಪುರುಷರು ಎಂದು ನಂಬಲಾಗಿದೆ.ಈ ವಲೀರವರ ಸಮಾಧಿಯ ಜಮೀನಿನಲ್ಲಿ ಉಳುಮೆ ಮಾಡುವಾಗ "ವಲೀ" ರವರು ಲೀನರಾಗಿರುವ ಸ್ಥಳವನ್ನು ನೇಗಿಲಿನಿಂದ ಉಳುಮೆ ಮಾಡಿ ಮರುದಿನ ಬಂದು ನೋಡಿದಾಗ ಮತ್ತೆ "ವಲೀ"ರವರ ಸಮಾಧಿಯ ಮಟ್ಟ ಮಾಜಾರಿನ ರೀತಿಯಲ್ಲಿ ಮಣ್ಣು ಗುಡ್ಡೆಯಾಗುವುದು ಕಂಡು ಬಂದಿತ್ತು.ನಂತರದಲ್ಲಿ ಆ ರೈತ ಆ ಸಮಾಧಿಯ ಜಾಗವನ್ನು ಬಿಟ್ಟು ಉಳುಮೆ ಮಾಡಲು ಮುಂದಾದಾಗ ಅವನಿಗೆ ವ್ಯವಸಾಯದಲ್ಲಿ ತುಂಬಲಾಗದ ನಷ್ಟವಾಗಿ ಆ ಜಮೀನನ್ನು ಮಾರಾಟ ಮಾಡಿದನು.ಆ ಜಮೀನನನ್ನು ತೆಗೆದುಕೊಂಡವನು ಸಮಾಧಿಯ ಮಹತ್ವವನ್ನು ತಿಳಿಯದೆ ಈ ವಿಷಯವನ್ನು ನಿರಾಕರಿಸಿ ವ್ಯವಸಾಯವನ್ನು ಮಾಡಲು ವಿರೋಧಿಸಿದ್ದ.ಅವನಿಗೆ ಕೆಲವೇ ದಿನಗಳಲ್ಲಿ ಅವನ ಅಂಗಾಂಗಗಳು ಸ್ವಾಧೀನ ಕಳೆದುಕೊಂಡು ಸಾವನ್ನಪ್ಪಿದನು.ಇದನ್ನು ತಿಳಿದ ಅವನ ಕುಟುಂಬದವರು ಆ ಸಮಾಧಿಯನ್ನು ಮುಸ್ಲಿಂ ಸಮುದಾಯದವರಿಗೆ 21 ಕುಂಟೆ ಜಾಗವನ್ನು ಮಾರಿದರು.ಉತ್ಸವಕ್ಕೆ ಬಂದ ಭಕ್ತಾದಿಗಳಿಗೆ ಭೋಜನದ ವ್ಯವಸ್ಥೆ ಮಾಡಲಾಗುತ್ತದೆ.ಈ ಉತ್ಸವದಲ್ಲಿ ಎಲ್ಲಾ ಧರ್ಮಿಯರು ಪಾಲ್ಗೊಳ್ಳುತ್ತಾರೆ.ತುಂಗಣಿಯಲ್ಲಿ ಮುಸ್ಲಿಂ ಸಮುದಾಯದ 3 ಮನೆಗಳಿದ್ದು, ಉಳಿದ ಬಹುತೇಕ ಸುಮಾರು 596 ಮನೆಗಳಲ್ಲಿ ಲಿಂಗಾಯಿತರು, ಪರಿಶಿಷ್ಟ ಜಾತಿ, ಪರಿಶಿಷ್ಟಪಂಗಡ, ಒಕ್ಕಲಿಗ ಹಾಗೂ ಆಚಾರ್ಯರು ವಾಸವಾಗಿದ್ದಾರೆ.

ಇವರಲ್ಲಿ ಪರಿಶಿಷ್ಟ ವರ್ಗದವರು 96 ಕುಟುಂಬಗಳು ಲಿಂಗಾಯಿತರು-02 ಕುಟುಂಬಗಳು ವಾಸವಾಗಿದ್ದಾರೆ.ಹೀಗೆ ಈ ಊರು ಬಹುತೇಕವಾಗಿ ಅನ್ಯ ಧರ್ಮಿಯರು ವಾಸವಾಗಿರುವ

ತುಂಗಣಿಯಲ್ಲಿ 300-400 ವರ್ಷಗಳ ಹಿಂದಿನಿಂದಲೂ ಇಲ್ಲಿ ಸೈನಿಕರ ತಾಣವಾಗಿತ್ತು.ಎಂದು ತಿಳಿದು ಬರುತ್ತದೆ.ಸೈನಿಕರು ಕುದುರೆಗಳನ್ನು ಕಟ್ಟಿಹಾಕುತ್ತಿದ್ದರು. ಎಂಬುದಕ್ಕೆ ಸಾಕ್ಷಿಯಾಗಿ ಎರಡುಕಲ್ಲುಗಳು ಸಹ ಈ ದರ್ಗಾದ ಬಳಿ ಇದೆ.. ತುಂಗಣಿಯ ದರ್ಗಾದ ಬಳಿ ಒಂದು ನೀರಿನ ಕೊಳವಿದೆ. ಈ ನೀರಿನ ಕೊಳದಲ್ಲಿಯೇ ಅಂದಿನ ಸೈನಿಕರು ಹಾಗೂ ಈ "ವಲೀ" ರವರು ಕೊಳದ ನೀರನ್ನು ಬಳಸುತ್ತಿದ್ದರು.ಈ ಕೊಳ ಅನೇಕ ನಂಬಿಕೆಗಳಲ್ಲಿ ಹೆಸರುವಾಸಿಯಾಗಿದೆ.ಹಾಗೆಯೇ ಒಂದು ಹುತ್ತವು ಆ ಸ್ಥಳದಲ್ಲಿ ಇದೆ. ಹುತ್ತದ ಬಳಿ ಮಂಡಿ ಊರಿ ಕುಳಿತುಕೊಂಡು ಎರಡು ಕೈಗಳನ್ನು ನೆಲದ ಮೇಲೆ ಸ್ವಲ್ಪ ಅಂತರದಲ್ಲಿಟ್ಟುಕೊಂಡಾಗ ನಾವು ನೆನೆಯುವ ವಿಷಯವು ಸಫಲವಾಗುತ್ತಿದ್ದರೆ ಎರಡು ಕೈಗಳು ಜೋಡಿಯಾಗುತ್ತವೆ. ಎಂಬ ನಂಬಿಕೆ ಇದೆ.

ಇನ್ನೊಂದು ಜನಪದ ನಂಬಿಕೆಯ ಪ್ರಕಾರ ಈ ದರ್ಗಾದ ಹತ್ತಿರವಿರುವ ನೀರಿನ ಕೊಳದ ಮಹತ್ವವನ್ನು ಹೇಳುತ್ತಾರೆ.ಈ ನೀರಿನ ಕೊಳವನ್ನು "ಶಫಾ ಕುಂಡಾ" ಎಂದು ಕರೆಯುತ್ತಾರೆ."ಶಫಾ" ಆದರೆ "ನಿವಾರಣೆ" ಎಂದು ಮತ್ತು ಕುಂಡಾ ಎಂದರೆ "ಕೊಳ" ಎಂಬ ಅರ್ಥವಿದೆ.ಈ ಕೊಳದ ನೀರನ್ನು ಚರ್ಮರೋಗದವರು ತಮ್ಮ ಮೈಮೇಲೆ ಸುರಿದುಕೊಂಡರೆ ಅವರ ಚರ್ಮ ರೋಗಗಳು ಮಾಯವಾಗಿ ಗುಣಮುಖರಾಗುತ್ತಾರೆ. ಇನ್ನೊಂದು ಜನಪದರ ನಂಬಿಕೆಯ ಪ್ರಕಾರ ಹಾಲು ಕೊಡುವ ಹಸುವಿನ ಕೆಚ್ಚಲಿನಲ್ಲಿ ರಕ್ತಸ್ರಾವವಾಗಿ ಹಾಲು ಕರೆದಾಗ ಹಾಲಿನ ಬದಲು ರಕ್ತ ಬರುತ್ತಿದ್ದರೆ ಈ ದರ್ಗಾದ ಹತ್ತಿರ ಕರೆದುಕೊಂಡು ಬಂದು "ವಲೀ"ರವರ ಹೆಸರಿನಲ್ಲಿ ಫಾತೇಹ ಮಾಡಿಸಿ ಕೊಳದ ನೀರನ್ನು ಹಸುವಿನ ಮೇಲೆ ಸುರಿದು ಹಸುವಿಗೆ ಸ್ನಾನ ಮಾಡಿಸಿದ ನಂತರ ಹಾಲು ಕರೆದಾಗ ರಕ್ತ ಬರುವುದು ಮಾಯವಾಗಿ ಶುದ್ದವಾದ ಹಾಲು ಆ ಸ್ಥಳದಲ್ಲೇ ಕರೆದಾಗ ಬರುತ್ತದೆ. ಎಂದು ಅಲ್ಲಿಗೆ ಭೇಟಿ ಕೊಟ್ಟಾಗ ಅಲ್ಲಿ ಬಂದ ಭಕ್ತಾದಿಗಳು ತಿಳಿಸಿದರು.

ಹೀಗೆ ಅನೇಕ ಪವಾಡ ಹಾಗೂ ನಂಬಿಕೆಗಳಿಂದ ಹೆಸರು ವಾಸಿಯಾಗಿರುವ ತುಂಗಣಿಯ ದರ್ಗಾವು ಕನಕಪುರ ತಾಲ್ಲೂಕಿನಲ್ಲಿಯೇ ಪ್ರಮುಖ ದರ್ಗಾವಾಗಿದೆ.ಅಮವಾಸ್ಯೆಯ ದಿನ ಹೆಚ್ಚು ಭಕ್ತಾದಿಗಳು ಬಂದು ತಮ್ಮ ಕಷ್ಟಗಳ ನಿವಾರಣೆಗೆ ಹರಕೆ ಮಾಡಿಕೊಂಡು ಫಾತೇಹ ಓದಿಸಿ ಹೋಗುತ್ತಾರೆ. ಇನ್ನೊಂದು ಜನಪದ ಕಥೆಯ ಪ್ರಕಾರ ಇಲ್ಲಿ ಭೂತ, ಪ್ರೇತ, ಪಿಶಾಚಿ, ಗಾಳಿ ಆವರಿಸಿದ ಜನರನ್ನು ಕರೆತಂದು, ಅವುಗಳಿಂದ ಮುಕ್ತಿ ದೊರೆಯುವಂತೆ ಮುರ್ಷದ್‌ರವರ ಸಹಾಯದಿಂದ "ವಲೀ"ರವರನ್ನು ಆರಾಧಿಸುವ ಮೂಲಕ ವಲೀರವರ ಕರಾಮತ್ತಿನಲ್ಲಿ ಭೂತ,

ಪ್ರೇತ, ಗಾಳಿಗಳನ್ನು ಓಡಿಸಿ ಸಮಸ್ಯೆಗೆ ಒಳಗಾಧವರನ್ನು ಸಮಸ್ಯೆಯಿಂದ ಮುಕ್ತಿಗೊಳಿಸಲಾಗುತ್ತದೆ ಎಂದು ಸಹ ಹೇಳಲಾಗುತ್ತದೆ. ನಾನು ಕ್ಷೇತ್ರ ಕಾರ್ಯಕ್ಕೆ ಹೋಗಿದ್ದ ಸಂದರ್ಭದಲ್ಲಿ ಗಾಳಿ ಸಮಸ್ಯೆಯಾಗಿದ್ದ ಒಂದು ಯುವತಿ ಅಲ್ಲಿ ಮೂರು ದಿನಗಳಿಂದ ದರ್ಗಾದ ಒಳಗೆ, "ವಲೀ"ರವರ ಪಾದಗಳ ಹತ್ತಿರ ವಿಚಿತ್ರ ನೋವುಗಳಿಂದ ನರಳುತ್ತ ಮಲಗಿದುದ್ದನ್ನು ನಾನು ಕಂಡಿದ್ದೇನೆ. ಇದರ ಭಾವ ಚಿತ್ರವನ್ನು ಅನುಬಂಧದಲ್ಲಿ ಕಾಣಬಹುದಾಗಿದೆ. ಹೀಗೆ ಅನೇಕ ವಿಷಯಗಳಿಂದ ಭಕ್ತಾದಿಗಳಿಂದ ಆಕರ್ಷಿಸಲ್ಪಟ್ಟಿರುವ ಈ ದರ್ಗಾದಲ್ಲಿ ಬೆಂಗಳೂರಿನರಿಂದ ಹಜರತ್ ಸಿರಾಜುದ್ದೀನ್ ಷಾ ಖಾದ್ರಿಯವರು ದರ್ಗಾದ ಹತ್ತಿರವೇ ಮನೆ ಮಾಡಿಕೊಂಡು ಕುಟುಂಬವೆಲ್ಲವು ಅಲ್ಲಿಯೇ ನೆಲೆ ನಿಂತಿದೆ.ಪ್ರತಿದಿನ ಬರುವ ಭಕ್ತಾದಿಗಳಿಗೆ "ವಲೀ" ರವರ "ದರ್ಬಾರ್" ನ ಬಗ್ಗೆ ತಿಳಿಸುತ್ತಾ ಬಂದ ಭಕ್ತಾದಿಗಳಿಗೆ ಫಾತೇಹ ಓದಿಸಿ ಕೊಡುತ್ತಾ ಅಲ್ಲಿಯೇ ವಾಸವಾಗಿದ್ದಾರೆ.

**ಆಡನಕುಪ್ಪೆ**

**ಹಜರತ್ ಖ್ವಾಜಾ ಸಯ್ಯದ್ ಕೌಸರ್ ಅಲಿಷಾ ಖಾದ್ರಿಬಾನ್ವೆ**

ಈ ದರ್ಗಾವು ಕನಕಪುರದಿಂದ 4 ಕಿ.ಮೀ ದೂರದಲ್ಲಿದೆ. ಕನಕಪುರದಿಂದ ಬೆಂಗಳೂರಿಗೆ ಸಾಗುವ ರಸ್ತೆಯಲ್ಲಿ ಕನಕಪುರದಿಂದ ಒಂದು ಕಿ.ಮೀ ದೂರದಲ್ಲಿರುವ ರೈಸ್‌ಮಿಲ್ ಬಸ್ ನಿಲ್ದಾಣದಿಂದ ಕನಕಪುರದ ಕಡೆಯಿಂದ ಬಲಕ್ಕೆ ತಿರುಗಿದರೆ 3 ಕಿ.ಮಿ ರಸ್ತೆ ಕ್ರಮಿಸಿದಾಗ ಆಡನಕುಪ್ಪೆ ಗ್ರಾಮ ಸಿಗುತ್ತದೆ. ಆಡನಕುಪ್ಪೆ ಗ್ರಾಮದಲ್ಲಿ ಹಾದುಹೋಗುವ ತೋಕಸಂದ್ರ, ಮರಳವಾಡಿ ರಸ್ತೆ ಮಾರ್ಗದ ಬಲಗಡೆಗೆ ತಿರುಗಿದರೆ ಅಲ್ಲಿಂದ ಸ್ವಲ್ಪ ದೂರದಲ್ಲಿಯೇ ಆಡನಕುಪ್ಪೆಯ ಮಕಾನ್‌ನಲ್ಲಿ ಈ ದರ್ಗಾವಿದೆ. ಈ ದರ್ಗಾವಿರುವ ಸ್ಥಳವನ್ನು "ಬಂಗ್ಲೆ ಊರು" ಎಂದು ಸಹ ಕರೆಯಲಾಗುತ್ತದೆ. ಈ ಬಂಗ್ಲೆಯಲ್ಲಿರುವ ವಲೀಯವರನ್ನು ಹಜರತ್ ಖ್ವಾಜಾ ಸಯ್ಯದ್ ಕೌಸರ್ ಅಲಿ ಷಾ ಖಾದ್ರಿ ಬಾನ್ವೆ ದರ್ಗಾ ಎಂದು ಕರೆಯಲಾಗುತ್ತದೆ.

ಈ ದರ್ಗಾದ ಉತ್ಸವವು 22 ವರ್ಷಗಳಿಂದ ನಡೆಯುತ್ತಿದೆ.ದಿ : 10-06-2015 ರಂದು 22 ವರ್ಷದ ಉರುಸ್ ನಡೆಯಿತು. ಆ ಉತ್ಸವದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಿದ್ದಾಗ ಅನೇಕ ಮಾಹಿತಿಗಳು ಮತ್ತು "ವಲೀ"ಯವರ ಪವಾಡಗಳ ಬಗ್ಗೆ ದೊರೆತವು.ಈ ದರ್ಗಾದ ಉರುಸ್‌ನ್ನು ಬಂಗ್ಲೆಯ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ ಬಂಗ್ಲೆಯಿಂದ ಸ್ವಲ್ಪ ದೂರದಲ್ಲಿರುವ ಮಕಾನ್‌ಗೆ ತೆರಳಿ ಮಕಾನ್‌ನಲ್ಲಿರುವ "ವಲೀ"ರವರಿಗೆ ಗಂಧ, ಹೂವಿನ ಚಾದರ್, ಹಸಿರು ಬಟ್ಟೆಯ ಚಾದರ್ ಹೊದಿಸಿ, ಫಾತೇಹ ಮಾಡಿಸಲಾಗುತ್ತದೆ.ಭಕ್ತಾದಿಗಳು ನಂತರ ಊಟದ ವ್ಯವಸ್ಥೆಯಲ್ಲಿ ಎಲ್ಲರು "ವಲೀ"ರವರ ಪ್ರಸಾದವೆಂದು ಸ್ವೀಕರಿಸುವರು ನಂತರ ರಾತ್ರಿ ಇಡೀ

ಖವಾಲಿ ಗಾಯನ ಪ್ರತಿ ವರ್ಷವು ನಡೆಯುವುದು.ಈ ವರ್ಷ ಅಂದರೆ ದಿ:10-06-2015 ರಂದು ನಡೆದ ಖವಾಲಿಯು ಸ್ವಲ್ಪ ಸಮಸ್ಯೆ ಎದುರಾಯಿತು. ಕಾರಣ ತುಂತುರು ಮಳೆ ಸುರಿದುದ್ದರಿಂದ ಖಾವಲಿಗೆ ಹೆಚ್ಚು ಜನ ಸೇರಲಾಗಲಿಲ್ಲ. ಖವಾಲಿಯನ್ನು ಮಳೆಯಲ್ಲಿಯೇ ಕೇಳಿದರಾದರು ಮಳೆಯ ನೀರಲ್ಲಿ ಕುಳಿತಿದ್ದವರ ಮೇಲಿನ ಶಾಮಿಯಾನದಿಂದ ನೀರಿನ ಹನಿ ಹೆಚ್ಚಾದ್ದರಿಂದ ಬಹುಪಾಲು ಭಕ್ತಾದಿಗಳು ಖವಾಲಿಯಿಂದ ಮನೆಗಳ ಕಡೆ ನಡೆದರು.ಇದೊಂದು ಬಿಟ್ಟರೇ "ವಲೀ" ರವರ ಉರುಸ್ ಬಹಳ ಭಕ್ತಿ ಗೌರವಗಳಿಂದ ಉತ್ತಮ ರೀತಿಯಲ್ಲಿ ನೆರವೇರಿತ್ತು. ಹೀಗೆ ಪ್ರತಿ ವರ್ಷವು "ವಲೀ"ರವರ ಉರುಸ್ ನಡೆಯುತ್ತದೆ.

**ಈ ದರ್ಗಾದ ಐತಿಹ್ಯಗಳು**

ಆಡನಕುಪ್ಪೆಯಲ್ಲಿ ಐಕ್ಯರಾಗಿರುವ ಹಜರತ್ ಖ್ವಾಜಾ ಸಯ್ಯದ್ ಕೌಸರ್ ಅಲಿ ಷಾ ಖಾದ್ರಿ ಬಾನ್ವೆ ರವರು ಸುಮಾರು 70 ವರ್ಷದವರಾಗಿದ್ದಾಗ ಈ ಸ್ಥಳದಲ್ಲಿ ಐಕ್ಯರಾದರು ಎಂಬ ನಂಬಿಕೆ ಇದೆ.ಈ ದರ್ಗಾಕ್ಕೆ ಭೇಟಿಕೊಡುವ ಭಕ್ತಾದಿಗಳು ಇವರ "ಕರಾಮತ್"ಬಗ್ಗೆ ಅಪಾರವಾದ ನಂಬಿಕೆಯನ್ನು ಹೊಂದಿದ್ದಾರೆ. ಹೆಂಗಸರು, ಗಂಡಸರು, ಮಕ್ಕಳು, ಯುವಕರು, ಯುವತಿಯರನ್ನೊಳಗೊಂಡಂತೆ ವೃದ್ಧರು ಸಹ ಈ ದರ್ಗಾಕ್ಕೆ ಬಂದು ತಮ್ಮ ಕಷ್ಟಗಳನ್ನು ನಿವಾರಿಸಿಕೊಂಡು ಹೋಗುತ್ತಾರೆ. ಎಂದು ಸ್ಥಳೀಯ ಜನಪದರು ತಿಳಿಸುತ್ತಾರೆ.ಇವರ ಪವಾಡಗಳ ಬಗ್ಗೆ ಅಪಾರವಾದ ನಂಬಿಕೆ ಹಾಗೂ ಸ್ವಚ್ಛ ಮನಸ್ಸಿನಿಂದ ಈ ದರ್ಗಾಕ್ಕೆ ಬಂದು ಹರಕೆ ಮಾಡಿಕೊಂಡರೆ ಕಷ್ಟಗಳು ನಿವಾರಣೆಯಾಗುತ್ತವೆ.

ಈ ವಲೀರವರ ಪವಾಡಗಳ ಬಗ್ಗೆ ಜನಪದ ಕಥೆಗಳು ಇವೆ. ಕನಕಪುರದಲ್ಲಿ ವಾಸವಾಗಿರುವ ಇವರ ಶಿಷ್ಯರಾದ ಹಜರತ್ ಖ್ವಾಜ್ ಸಯ್ಯದ್ ಬಹುದಿನ್ ಅಲಿ ಷಾ ಸತ್ತರ್ ಜಾಕ್ ಬಂಡಾಲಿ ಮಂಡಲ್ ಬನೂದಾರ್ ರವರು ಈ "ವಲೀ" ರವರ ಜೊತೆಗೆ ಒಂದು ದಿನ ಮೋಟಾರು ಸೈಕಲ್‌ನಲ್ಲಿ ಶಿವನಸಮುದ್ರದ {ಸೀಸಾಮಂದರ್) ದರ್ಗಾದ "ವಲೀ"ಯಾದ ಹಜರತ್ ಮರ್‌ದಾನ್ ಗೈಬ್ ರವರ ದರ್ಶನ ಪಡೆದು ಹಿಂದಿರುಗುವಾಗ ರಸ್ತೆ ಮಧ್ಯದಲ್ಲಿ ಮೋಟಾರ್ ಸೈಕಲ್‌ನ ಪೆಟ್ರೋಲ್ ಖಾಲಿಯಾಯಿತಂತೆ, ಆಗ ಇಳಿದು ಅಲ್ಲಿಯೇ ಪಕ್ಕದಲ್ಲಿ ಹರಿಯುತ್ತಿದ್ದ ಹಳ್ಳದ ನೀರನ್ನು ತರಿಸಿ ಅದನ್ನು ಮಂತ್ರದಿಂದ ಜಪಿಸಿ ಮೋಟಾರ್ ಸೈಕಲ್‌ಗೆ ಹಾಕಿ ನೀರಿನಿಂದ ಮೋಟಾರ್ ಸೈಕಲ್ ಕನಕಪುರದವರೆಗೆ ಸುಮಾರು 10 ಕಿ.ಮೀ ದೂರ ನೀರಿನಲ್ಲಿ ಮೋಟಾರ್ ಸೈಕಲ್ ಚಲಾಯಿಸಿದ ಪವಾಡವನ್ನು ನೆನೆಯುತ್ತ ಅದಕ್ಕೆ ನಾನೇ ಸಾಕ್ಷಿ ಎಂದು ಹೇಳುತ್ತಾರೆ.

ಹೀಗೆ ಅನೇಕ ಐತಿಹ್ಯಗಳು ಸಹ ಈ "ವಲೀ" ರವರ ಜೀವನದ ಬಗ್ಗೆ ಜನಪದರಲ್ಲಿ ಇರುವುದು ಕಂಡುಬರುತ್ತದೆ.ಇಂತಹ ಕಾರಣಗಳಿಂದ ಈ ವಲೀರವರು ಇಂದಿಗೂ ಅನೇಕ ಪವಾಡಗಳನ್ನು ಮಾಡುವ ಮೂಲಕ ಸೇತುವೆಯಾಗಿರುವುದು ಗಮನಾರ್ಹವಾಗಿದೆ.

**ನಾರಾಯಣಪುರ (ಕಲ್ಲುಕೆರೆದೊಡ್ಡಿ)**

**ಹಜರತ್ ಶೇಖ್ ಇಮಾಮ್ ಉದ್ದೀನ್ ಷಾವಲಿ**
**ಹಜರತ್ ಶೇಖ್ ರೋಷನ್ ಷಾ ವಲಿ**
**ಹಜರತ್ ಶೇಖ್ ಹಸೇನ್ ಷಾ ವಲಿ**

ಕನಕಪುರ ಸಂತೆ ಕೋಡಿಹಳ್ಳಿ ಮಾರ್ಗ ಮಧ್ಯದಲ್ಲಿರುವ ನಾರಾಯಣಪುರವು ಕನಕಪುರದಿಂದ 8.ಕಿ.ಮೀ ದೂರದಲ್ಲಿದೆ. ಕನಕಪುರದಿಂದ ಸಂತೇ ಕೋಡಿಹಳ್ಳಿಗೆ ಹೋಗುವ ಮಾರ್ಗದಲ್ಲಿ ಸಿಗುವ ನಾರಾಯಣಪುರ ಊರಿನ ಬಲಭಾಗಕ್ಕೆ ತಿರುಗಿ ಒಂದು ಕಿ.ಮೀ ದೂರದಲ್ಲಿರುವ ಕಲ್ಲುಕೆರೆ ದೊಡ್ಡಿಯಲ್ಲಿ ಮೂರು "ವಲೀ"ಗಳ ದರ್ಗಾವಿದೆ. ಈ ಮೂರು ವಲೀಗಳು ಅಣ್ಣ ತಮ್ಮಂದಿರೆಂದು ಹೇಳಲಾಗುತ್ತದೆ.ಈ ದರ್ಗಾದಲ್ಲಿ ಐಕ್ಯರಾಗಿರುವರು.ಸುಮಾರು 200 ವರ್ಷಗಳ ಹಿಂದೆ ಎಂದು ತಿಳಿದು ಬರುತ್ತದೆ.ಆ ವಲೀಗಳನ್ನು ಹೀಗೆ ಕರೆಯುತ್ತಾರೆ. ಹಜರತ್ ಶೇಖ್ ಹಾಜಿ ಇಮಾಮುದ್ದೀನ್ ಷಾ ವಲೀ, ಹಜರತ್ ರೋಷನ್ ಷಾ ವಲೀ, ಹಜರತ್ ಶೇಖ್ ಹಸೇನ್ ಷಾ ವಲೀ ರವರ ಮೂರು ಸಮಾಧಿಗಳು ಸಾಲಾಗಿ ಒಂದೇ ದರ್ಗಾದ ಒಳಗಡೆ ಐಕ್ಯರಾಗಿದ್ದಾರೆ. ಇವರ ಉರುಸ್ 35ವರ್ಷಗಳಿಂದ ಪ್ರತಿ ವರ್ಷವು ನಡೆಯುತ್ತಾ ಬಂದಿದೆ.ಪ್ರತಿ ವರ್ಷದ ದಸ್ತಗೀರ್ ತಿಂಗಳು 7–8ನೇ ತಾರೀಖಿನಲ್ಲಿ ಇವರ ಉರುಸ್ ನಡೆಯುತ್ತದೆ.ಈ ಉರುಸ್‌ಗೆ ಹೊರಗಿನವರೇ ಹೆಚ್ಚಾಗಿ ಬರುತ್ತಾರೆ.ಕಲ್ಲುಕೆರೆದೊಡ್ಡಿಯಲ್ಲಿ ನಾರಾಯಣಪುರದಲ್ಲಿ 7 ಮುಸ್ಲಿಂ ಕುಟುಂಬಗಳು ಇವೆ. ಅನ್ಯ ಧರ್ಮಿಯರು 100 ಕುಟುಂಬಗಳಿವೆ.

ಕನಕಪುರ ತಾಲ್ಲೂಕಿನಾದ್ಯಾಂತ ಇರುವ ದರ್ಗಾಗಳಲ್ಲಿ ಅಣ್ಣತಮ್ಮಂದಿರು ಒಂದೇ ಸೂರಿನಲ್ಲಿ ಮೂರು ವಲೀಗಳ ದರ್ಗಾ ಕಂಡುಬರುವುದು, ಈ ದರ್ಗಾದಲ್ಲಿ ಮಾತ್ರ.ಈ ದರ್ಗಾದ ಮತ್ತೊಂದು ವಿಶೇಷತೆ ಎಂದರೆ ದರ್ಗಾದ ಪಕ್ಕದಲ್ಲಿ ಮೋಸ್ ಸಿಲಾಮನ್ (ನಾಗರಹಾವು) ಬೆಪ್ಪಲೇ ಮರದ ಕೆಳಗೆ ವರ್ಷಕ್ಕೆ ಎರಡು ಸಲ ಬಂದು ಭಕ್ತಾದಿಗಳಿಗೆ ದರ್ಶನ ಕೊಟ್ಟು ಹೋಗುತ್ತದೆ.

ಈ ದೃಶ್ಯ ಎಲ್ಲರಿಗೂ ಲಭ್ಯವಾಗುವುದಿಲ್ಲ. ಕೆಲವೇ ಕೆಲವು ಭಕ್ತರಿಗೆ ಮಾತ್ರ.ಇದರ ದರ್ಶನವಾಗಿ ಅಂದು ಕೊಂಡ ಹರಕೆಗಳು ಸಫಲವಾಗುವ ಸೂಚನೆಯನ್ನು ನೀಡಿ ಹೋಗುತ್ತದೆ.ಎಂದು ತಿಳಿಸುತ್ತಾರೆ.

ಈ ವಲೀರವರು ಉತ್ತಮ ಪವಾಡ ಫಕೀರರಾಗಿದ್ದರು.ಇವರು ಈ ಸ್ಥಳದಲ್ಲಿ ಐಕ್ಯರಾಗುವ ಮುನ್ನ ಹಲವು ಪವಾಡಗಳು ಮಾಡಿದ್ದರಂತೆ ಎಂಬ ಜನಪದರ ನಂಬಿಕೆಯಂತೆ ರೈತರಿಗೆ ರೇಷ್ಮೆ ಬೆಳೆಯಲ್ಲಿ ನಷ್ಟ ಅನುಭವಿಸಿದಾಗ, ದನಕರುಗಳಿಂದ ನೆಮ್ಮದಿ ಕಳೆದುಕೊಂಡಾಗ ಯಾವುದಾದರೂ ಕೆಲಸಗಳನ್ನು ಮಾಡುವ ಮುನ್ನ ಈ ವಲೀರವರ ದರ್ಶನ ಪಡೆದು, "ವಲೀ" ರವರ ಹೆಸರಿನಲ್ಲಿ "ಫಾತೇಹ" ಓದಿಸಿದರೆ ಎಲ್ಲಾ ಸಮಸ್ಯೆಗಳಿಂದ ಮುಕ್ತಿ ಪಡೆಯುತ್ತಾರೆ ಎಂದು ನಂಬಲಾಗಿದೆ.

## ಇಂದಿರಾನಗರ

**ಶ್ರೀಮತಿ / ಲೇಟ್ ಜಮಾಲ್ ಮಸ್ತಾನಿಯಾ ದರ್ಗಾ**

**ದೀದಾರ್ ಅಲಿಷಾ ದರ್ಗಾ**

### ಶ್ರೀಮತಿ / ಲೇಟ್ ಜಮಾಲ್ ಮಸ್ತಾನಿಯಾ ದರ್ಗಾ

ಕನಕಪುರ ಸಂತೇಕೋಡಿಹಳ್ಳಿಯ ಮಾರ್ಗಮಧ್ಯದಲ್ಲಿರುವ ಇಂದಿರಾನಗರವು ಕನಕಪುರದಿಂದ 15 ಕಿ.ಮೀ ದೂರದಲ್ಲಿದೆ. ಕನಕಪುರದಿಂದ ಹೋಗುವಾಗ ಎಡ ಬದಿಯಲ್ಲಿ ನಿರ್ಮಿಸಲಾಗಿರುವ ಶ್ರೀಮತಿ / ಲೇಟ್ ಜಮಾಲ್ ಮಸ್ತಾನಿಯಾ ದರ್ಗಾವು ಕನಕಪುರ ತಾಲ್ಲೂಕಿನಾದ್ಯಂತ ಇರುವ ದರ್ಗಾಗಳಲ್ಲಿ ಅತ್ಯಂತ ಅಪರೂಪದ ದರ್ಗಾವಾಗಿದೆ.

ಈ ದರ್ಗಾವು ಸುಮಾರು 100 ವರ್ಷಗಳ ಹಿಂದಿನದ್ದು, ಎಂದು ಹೇಳುತ್ತಾರೆ.ಅಂದರೆ 30 ವರ್ಷಗಳಿಂದ ಈ ದರ್ಗಾದಲ್ಲಿ ಉರುಸ್ ನಡೆಯುತ್ತಾ ಬಂದಿದೆ.ಈ ದರ್ಗಾದ ಉರುಸ್ ಆಗಸ್ಟ್ ತಿಂಗಳ ಕೊನೆಯ ವಾರದಲ್ಲಿ ನಡೆಯಲಿದೆ.ಎಲ್ಲಾ ದರ್ಗಾಗಳಂತೆಯೇ ಇಲ್ಲಿಯು ಉರುಸ್‌ನ ವೈಭವದಿಂದ ನಡೆಯುತ್ತದೆ.ಮಹಿಳಾ ಉರುಸ್ ಆಗಿರುವುದರಿಂದ ಹೆಚ್ಚು ಮಹಿಳೆಯರು ಈ ಉರುಸ್‌ನಲ್ಲಿ ಭಾಗವಹಿಸುವ ಮೂಲಕ ಮಹಿಳಾ "ವಲೀ"ಯವರ ಸಮಾಧಿಯ ದರ್ಶನ ಪಡೆದು ತಮ್ಮ ಕಷ್ಟಗಳನ್ನು ಭಿನ್ನಹಿಸಿಕೊಳ್ಳುತ್ತಾರೆ.ಆ ಮೂಲಕಹಲವು ಹರಕೆಗಳನ್ನು ಸಹ ಕಟ್ಟಿಕೊಳ್ಳುತ್ತಾರೆ.ಉರುಸ್‌ನ ಸಂದರ್ಭದಲ್ಲಿ ಖವಾಲಿ ಗಾಯನ ಮಾಡಲಾಗುತ್ತದೆ.ಈ ಖವಾಲಿ ಗಾಯನ ಮಾಡಿಸುವುದು ವಿಶೇಷವಾಗಿದೆ.ಮುಸ್ಲಿಂ ಸಮುದಾಯದಲ್ಲಿ ಮಹಿಳಾ "ವಲೀ" ಯವರನ್ನು ನಾವು ಗುರುತಿಸಬಹುದಾದರು ಈ ದರ್ಗಾದಲ್ಲಿರುವ ಶ್ರೀಮತಿ / ಲೇಟ್ ಜಮಾಲ್ ಮಸ್ತಾನಿಯಾ ಕನಕಪುರ ತಾಲ್ಲೂಕಿನಲ್ಲಿಯೇ ಏಕೈಕ ಮಹಿಳಾ ವಲೀಯಾಗಿದ್ದಾರೆ.

*** ಮುರ್ಷದ್ ಅಲಿಜಾನ್ 55 ವರ್ಷ**

**ದೀದಾರ್ ಅಲಿಷಾ ದರ್ಗಾ**

ದೀದಾರ್ ಅಲಿ ಷಾ ದರ್ಗಾವು ಇಂದಿರಾನಗರದ ಊರ ಒಳಭಾಗದಲ್ಲಿದೆ.ಈ ದರ್ಗಾವು ಸುಮಾರು 200 ವರ್ಷಗಳ ಹಿಂದಿನಿಂದಲೂ ಈ ಸಮಾಧಿ ಇದೆ.ಇವರ ಉರುಸ್‌ನ್ನು 45 ವರ್ಷಗಳಿಂದ ದಸ್ತಗೀರ್ ತಿಂಗಳಿನಲ್ಲಿ ಉರುಸಸ್ ನಡೆಯುತ್ತದೆ.ಈಉರುಸ್‌ಗೆ ಇಂದಿರಾನಗರದ ಸುತ್ತ –ಮುತ್ತಲಿನ ಹಳ್ಳಿಯ ಮತ್ತು ಕನಕಪುರ ಸುತ್ತ–ಮುತ್ತಲಿನ ನಗರಗಳಿಂದ ಆಗಮಿಸುತ್ತಾರೆ.ಈ ದರ್ಗಾಕ್ಕೆ ಹೆಚ್ಚಿನ ಭಾಗವಾಗಿ ಬೆಂಗಳೂರಿನಿಂದ ಹೆಚ್ಚಿನ ಭಕ್ತಾದಿಗಳು ಬರುತ್ತಾರೆ.ಇದರೊಂದಿಗೆ ಅವರು ಮಾಡಿಕೊಂಡ ಹರಕೆಗಳನ್ನು ತೀರಿಸುತ್ತಾರೆ.ದೀದಾರ್ ಅಲಿ ಷಾ ವಲೀ ಅವರನ್ನು ಅಮವಾಸ್ಯೆ ಹಾಗೂ ಹುಣ್ಣಿಮೆಯಲ್ಲಿ ಬಂದು ತಮ್ಮ ಕಷ್ಟಗಳಿಗೆ ಪರಿಹಾರವಾಗುವ ಹಾಗೆ ಫಾತೇಹ ಮಾಡಿಸಿಕೊಂಡು ಹೋಗುತ್ತಾರೆ.ಈ ಊರಿನಲ್ಲಿ ಬಹುಪಾಲು ಅನ್ಯ ಧರ್ಮದವರು ಹೆಚ್ಚಾಗಿದ್ದು, ಮುಸ್ಲಿಂ ಸಮುದಾಯ ಕುಟುಂಬಗಳು ಕಡಿಮೆ ಇದ್ದರು ಅನ್ಯ ಧರ್ಮಿಯರೇ "ವಲೀ"ರವರ ಉರುಸ್‌ನಲ್ಲಿ ಹಚ್ಚಿನ ಜನ ಪಾಲ್ಗೊಂಡು ಉರುಸ್‌ನ್ನು ಆಚರಿಸುತ್ತಾರೆ. ಹೀಗೆ ಈ ದರ್ಗಾ ಹಿಂದೂ ಮುಸ್ಲಿಂರನ್ನು ಒಂದೂಗೂಡಿಸುವ ಮತ್ತು ಸಹಬಾಳ್ವೆಯ ಜೊತೆಗೆ ಅನ್ಯಧರ್ಮದ ಆಚರಣೆಗಳನ್ನು ಗೌರವಿಸಲು ಸಹಕಾರಿಯಾದ ವಾತಾವರಣವನ್ನು ಸೃಷ್ಟಿಸಿರುವುದು.ಗಮನಾರ್ಹವಾದ ವಿಷಯವಾಗಿರುವುದು ದರ್ಗಾದ ಪ್ರಮುಖ ಮಹತ್ವವಾಗಿದೆ.

**ಸಂತೇ ಕೋಡಿಹಳ್ಳಿ**

**ಹಜರತ್ ಮಖ್‌ಬೂಲ್ ಅಲಿಷಾ ಖಾದ್ರಿ**
**ಹಜರತ್ ಹುಜೂರ್ ಅಲಿಷಾ ಖಾದ್ರಿ**

ಕನಕಪುರ ಹುಣಸನಹಳ್ಳಿಯ ಮಾರ್ಗದ ಮಧ್ಯಭಾಗದಲ್ಲಿರುವ ಸಂತೇಕೋಡಿಹಳ್ಳಿ ಕನಕಪುರದಿಂದ 16 ಕಿ.ಮೀ ದೂರದಲ್ಲಿಯೇ ಕನಕಪುರದಿಂದ ಹೋಗುವಾಗ ಸಂತೆ ಕೋಡಿಹಳ್ಳಿಯ ಪ್ರದೇಶದಲ್ಲಿ ಒಂದು ಹೊಳೆ ಇದೆ. ಆ ಹೊಳೆಯನ್ನು ದಾಟಿದ ಕೂಡಲೇ ಬಲಭಾಗಕ್ಕೆ ತಿರುಗಿ ಸ್ವಲ್ಪ ದೂರ ಹೋದರೆ ಅಲ್ಲಿ ಮುಸ್ಲಿಂ ಮಕಾನ್ ಇದೆ.ಈ ಮಕಾನಿನಲ್ಲಿರುವ ದರ್ಗಾವೇ ಹಜರತ್ ಹುಜೂರ್ ಅಲಿ ಷಾಖಾದ್ರಿ ದರ್ಗಾವಿದೆ.

ಈ ದರ್ಗಾವು ಅನೇಕ ರೀತಿಯಲ್ಲಿ ಹೆಸರು ವಾಸಿಯಾಗಿದ್ದರು ಸಹ ಹೆಚ್ಚಿನ ಭಕ್ತಾದಿಗಳು ಸೇರುವುದು ವರ್ಷದಲ್ಲಿ ಒಂದು ಸಲ ಅದು ಉರುಸ್ಸನಸಂದರ್ಭದಲ್ಲಿ ಮಾತ್ರ ಉರುಸ್ ಸಂದರ್ಭದಲ್ಲಿ ದರ್ಗಾವನ್ನು ಸಂಪೂರ್ಣವಾಗಿ ಸ್ವಚ್ಚಗೊಳಿಸಿ ದೀಪಾಲಂಕಾರಗಳಿಂದ ಶೃಂಗರಿಸಿ ಧ್ವನಿವರ್ಧಕಗಳನ್ನು ಹಾಕುವ ಮೂಲಕ "ವಲೀ"ಯವರ ಬಗ್ಗೆ ಸುದೀರ್ಘವಾದ ಹಾಡುಗಳು

ಬರುತ್ತಿರುತ್ತವೆ. ಹಾಗೂ ಉರುಸ್ ಸಂದರ್ಭದಲ್ಲಿ ಇಡೀ ರಾತ್ರಿ 'ಖವಾಲಿ" ಏರ್ಪಡಿಸಿರುತ್ತಾರೆ. ಈ ಖವಾಲಿಯಲ್ಲಿ "ವಲೀ"ರವರ ಹುಟ್ಟು ಮತ್ತು ಅವರ ಪವಾಡಗಳ ಬಗ್ಗೆ ತಿಳಿಸುತ್ತಾ ವಲೀ ಮತ್ತು ಅಲ್ಲಾನನ್ನ ಇಡೀ ರಾತ್ರಿ ನೆನೆಯುವುದು ಕಂಡುಬರುತ್ತದೆ.ದರ್ಗಾಕ್ಕೆ ಬರುವ ಭಕ್ತಾದಿಗಳ ಅನೇಕ ಕೋರಿಕೆಗಳು ಈಡೇರಿವೆ. ಇನ್ನು ಹಲವರು ಕೋರಿಕೆಗಳ ಮೂಲಕ ಹರಕೆಗಳನ್ನು ಕಟ್ಟಿಕೊಳ್ಳುವುದು ಕಂಡುಬರುತ್ತದೆ.

**ಹಜರತ್ ಮಖ್‌ಬೂಲ್ ಷಾ ಖಾದ್ರಿ**

ಹಜರತ್ ಹುಜೂರ್ ಅಲಿಷಾ ಖಾದ್ರಿಯವರು ಸಂತೇಕೋಡಿಹಳ್ಳಿಯ ಕೆರೆ ಬಲ ಬದಿಯಲ್ಲಿರುವ ಮುಸ್ಲಿಮರ ಮದರಸದ ಪಕ್ಕ ಐಕ್ಯರಾಗಿದ್ದಾರೆ. ಇವರ ಮೂಲದ ಬಗ್ಗೆ ಕೆಲವರು ಹೇಳುವ ಮಾಹಿತಿಯ ಪ್ರಕಾರ ಇವರು ಅರಬ್ ರಾಷ್ಟ್ರದಿಂದ ಬಂದವರೆಂದು ಹೇಳಲಾಗುತ್ತದೆ.ಸುಮಾರು 200 ವರ್ಷಗಳ ಹಿಂದೆ ಈ ಪ್ರದೇಶಕ್ಕೆ ಬಂದು ಇಲ್ಲಿ ನೆಲೆಸಿದ್ದಾರೆಂದು ಜನಪದರು ತಿಳಿಸುತ್ತಾರೆ. ಇವರ ಉರುಸ್ ದಿ: 15-3-2015 ರಂದು ನಡೆಯಿತು. ಕೋಡಿಹಳ್ಳಿಯ ಇನ್ನೊಂದು ದರ್ಗಾವಾದ ಹಜರತ್ ಹುಜೂರ್ ಅಲಿ ಷಾ ಖಾದ್ರಿ ವಲೀರವರ ಉರುಸ್ ದಿನವೇ ಇಲ್ಲಿಯು ಉರುಸ್ ನಡೆಯುತ್ತದೆ.ಎರಡು ಕಡೆ ಒಂದೇ ಸಲ ಉರುಸ್ ನಡೆಯುವುದರಿಂದ ಬಂದ ಭಕ್ತಾದಿಗಳು ಎರಡು ದರ್ಗಾಗಳಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ.ಮೇಲಿನ ದರ್ಗಾದಲ್ಲಿ ಮಾಡುವಂತಹ ಎಲ್ಲಾ ರೀತಿಯ ವೈಭವಗಳು ಮಾಡಲಾಗುತ್ತದೆ.

ಈ "ವಲೀ" ರವರನ್ನು ನಂಬಿದ ಭಕ್ತಾದಿಗಳಿಗೆ ಒಳ್ಳೆಯದಾಗಿದೆ ಎಂದು ಅಲ್ಲಿಗೆ ಹೋಗಿದ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ತಿಳಿಯಿತು.ಇಡೀ ಕನಕಪುರ ತಾಲ್ಲೂಕಿನಾದ್ಯಂತ ಆಚರಿಸುವ ಉರುಸ್ ಆಚರಣೆಗಳಲ್ಲಿ ಈ ದರ್ಗಾಗಳ ಆಚರಣೆಯು ತನ್ನದೇ ಆದ ಪ್ರಾಮುಖ್ಯತೆಯಿಂದ ವಿಭಿನ್ನವಾಗಿದೆ.ಏಕೆಂದರೆ ಯಾವ ದರ್ಗಾದಲ್ಲಿ ಸೇರದಷ್ಟು ಭಕ್ತಾದಿಗಳು ಈ ದರ್ಗಾದ ಉರುಸ್ ಸಂದರ್ಭದಲ್ಲಿ ಸೇರುತ್ತಾರೆ.ಇದರಿಂದ ಉರುಸ್ ಆಚರಣೆಯು ಬಹಳ ಅರ್ಥಪೂರ್ಣವಾಗಿ ಮತ್ತು ಜನಸಾಗರದಂತೆ ಕಾಣುವ ಭಕ್ತಾದಿಗಳಿಂದ ಈ ದರ್ಗಾಕ್ಕೆ ಒಳಗೆ ಹೋಗುವ ಮುನ್ನ ಹೊರಗಡೆಯ ಗೌಸ್‌ಯೇ ಪಾಕ್ ಝುಂಡಾಕ್ಕೆ ಹೂ ಹಾಕಿ ಗಂಧದ ಕಡ್ಡಿ ಹಚ್ಚಿ ಹೋಗಬೇಕು.ಎಲ್ಲಾ ದರ್ಗಾಗಳಂತೆಯೇ ಈ ದರ್ಗಾದಲ್ಲಿಯು ಉರುಸ್‌ನ ಮೆರವಣಿಗೆ, ಊಟ, ಹರಕೆಗಳು, ಪೂಜಾ ವಿಧಾನಗಳು ನಡೆಯುವುದು ಕಂಡು ಬರುತ್ತದೆ.

## ಚಿಕ್ಕಬ್‌ಹಳ್ಳಿ

### ಹಜರತ್ ಖ್ವಾಜಾ ರೆಹಮತ್ ಅಲಿಷಾ ಖಾದ್ರಿ

ಹಜರತ್ ಖ್ವಾಜಾ ರೆಹಮತ್ ಅಲಿಷಾ ಖಾದ್ರಿಯವರು ಮೂಲ ಊರು ಚಿಕ್ಕಬ್ ಹಳ್ಳಿಯಾಗಿತ್ತು. ಇವರು ಚಿಕ್ಕ ವಯಸ್ಸಿನಲ್ಲಿಯೇ ಊರನ್ನು ಬಿಟ್ಟ ಕನಕಪುರವನ್ನು ಸೇರಿಕೊಂಡವರು ಇವರು ಹಜರತ್ ಮುಸ್ಲಿಂ ಸಮುದಾಯದವರು 'ಬಯ್ಯತ್' ಪಡೆದುಕೊಂಡು ಫಕೀರರಾಗಿ ಮುಸ್ಲಿಂ, ಮುಸ್ಲಿಂ ಸಮುದಾಯದವರು ಸಾವನ್ನಪ್ಪಿದ ಶವಸಂಸ್ಕಾರ ಮಾಡಿದ ನಂತರದ ಮೂರು ದಿನದ, ನಾಲ್ಕು ದಿನದ, ಒಂಭತ್ತು ದಿನದ, ಇಪ್ಪತ್ತುದಿನದ, ನಾಲ್ಕು ದಿನದ ಆರು ತಿಂಗಳು ಮತ್ತು ಒಂದು ವರ್ಷದ ತಿಥಿಗಳಲ್ಲಿ ಸಾವನ್ನಪ್ಪಿದವರ ಹೆಸರಿನಲ್ಲಿ ಫಾತೇಹ ಓದಿಸುತ್ತ ಹಾಗೂ ಮನೆಯ ಹತ್ತಿರ ಬಂದವರಿಗೆ "ತಾವಿಜ್" (ತಾಯತ) ಕಟ್ಟುವ ಮೂಲಕ ಸಮಾಜದ ಜನಪದ ನಂಬಿಕೆಗೆ ಮಾರ್ಗದರ್ಶನ ನೀಡುತ್ತಾ ಇದ್ದರು.

ಇವರು ದಿ:04-05-2014 ರಂದು ಸಾವನ್ನಪ್ಪಿದರು. ಇವರ ಸತ್ಯ ಅಸತ್ಯಗಳನ್ನು ತಿಳಿದ ಚಿಕ್ಕಬ್ ಹಳ್ಳಿಯ ಮುಸ್ಲಿಂ ಸಮುದಾಯದವರು ಇವರನ್ನು ಚಿಕ್ಕಬ್‌ಹಳ್ಳಿಯ ಸ್ಮಶಾನದಲ್ಲಿ ಸ್ಥಳಾವಕಾಶ ಮಾಡಿಕೊಂಡಿದ್ದರಿಂದ ಇವರ ಸಮಾಧಿಯನ್ನು ಇಲ್ಲಿ ನಿರ್ಮಿಸಿದ್ದಾರೆ.ಇವರ ಭಕ್ತಾದಿಗಳು ಮತ್ತು ಶಿಷ್ಯರು ಈ ಸಮಾಧಿಯನ್ನು ಕಟ್ಟಿಸಿ, ದರ್ಗಾವನ್ನಾಗಿ ಪೂಜೆ ಮಾಡುತ್ತಾ ಬಂದಿದ್ದಾರೆ. ಇವರ ಮೊದಲ ಉರುಸ್‌ನನ್ನು ದಿ:04-05-2013 ರಂದು ಆಚರಿಸಿದರು. ಚಿಕ್ಕಬ್‌ಹಳ್ಳಿಯು ಕನಕಪುರದಿಂದ ಹುಣಸನಹಳ್ಳಿಗೆ ಹೋಗುವ ಮಾರ್ಗದಲ್ಲಿ ಬಲಭಾಗದಲ್ಲಿದೆ. ಕನಕಪುರದಿಂದ 17 ಕಿ.ಮೀ ದೂರದಲ್ಲಿದೆ. ಕೋಡಿಹಳ್ಳಿಯಿಂದ ಒಂದು ಕಿ.ಮೀ ದೂರದಲ್ಲಿದೆ. ಈ ವರ್ಷ ಉರುಸ್‌ನಲ್ಲಿ ಸುಮಾರು 500 ರಿಂದ 600 ಭಕ್ತಾದಿಗಳು ಉರುಸ್‌ನಲ್ಲಿ ಭಾಗವಹಿಸಿದ್ದರು

## ಹುಣಸನಹಳ್ಳಿ

### ಹಜರಹತ್ ಯುಸೂಫ್ ಅಲಿಷಾ ಖಾದ್ರಿ

ಕನಕಪುರದಿಂದ 31 ಕಿಮೀ ದೂರದಲ್ಲಿರುವ ಹುಣಸನಹಳ್ಳಿಯ ಪಕ್ಕದಲ್ಲಿರುವ ಪಟೇರದೊಡ್ಡಿಯಲ್ಲಿ ಐಕ್ಯರಾಗಿರುವ ಹಜರತ್ ಯುಸೂಫ್ ಅಲಿ ಷಾ ಖಾದ್ರಿ ರವರ ದರ್ಗಾವಿದೆ.ಈ ದರ್ಗಾದಲ್ಲಿರುವ "ವಲೀ" ರವರು 200 ವರ್ಷಗಳ ಹಿಂದೆ ಜನಿಸಿ ಕೃಷ್ಣರಾಜ ಒಡೆಯರ್‌ರವರ ಕಾಲದಲ್ಲಿ ಇದ್ದರೆಂದು ಇಲ್ಲಿನ ಜನಪದ ಕಥೆಗಳು ತಿಳಿಸುತ್ತದೆ.ಇವರ ಬಾಲ್ಯದ ಹೆಸರು ಸಯ್ಯದ್ ರೆಹಮಾನ್ ಷಾ ರವರು ಬಿಜಾಪುರದಿಂದ ಬಂದು ಪಟೇಲದೊಡ್ಡಿಯಲ್ಲಿ

ನೆಲೆನಿಂತಿದ್ದವರು ಇವರ ಉರುಸ್‌ನನ್ನು ಬಕ್ರೀದ್ ಹಬ್ಬವಾದ ನಾಲ್ಕನೇ ದಿನದಂದು ಪ್ರತಿ ವರ್ಷ ಉರುಸ್ ನಡೆಯುತ್ತದೆ.ಇಲ್ಲಿಯವರೆಗೆ 45 ವರ್ಷದಿಂದ ಉರುಸ್ ಆಚರಣೆ ನಡೆದಿದೆ.ದಿ:28-10-2015 ರಂದು 46ನೇ ಉರುಸ್ ನಡೆಯುತ್ತದೆ ಎಂದು ಮುರ್ಷದ್ ತಿಳಿಸಿದರು. ಎಲ್ಲಾ ದರ್ಗಾಗಳಂತೆಯೇ ಇಲ್ಲಿಯ ಉರುಸ್‌ನ ಮೆರವಣಿಗೆ ಹರಕೆ, ಊಟ ಉಪಚಾರ ಪೂಜೆಗಳು ಸಲ್ಲುತ್ತವೆ. ಎಲ್ಲಾ ಧರ್ಮೀಯರು ಸೇರಿ ಈ "ವಲೀ"ರವರ ಉರುಸ್‌ನಲ್ಲಿ ಭಾಗವಹಿಸುತ್ತಾರೆ.ಈ ಉರುಸ್‌ಗೆ ಸುಮಾರು ಒಂದು ಸಾವಿರದಿಂದ ಒಂದುವರೆ ಸಾವಿರ ಭಕ್ತಾದಿಗಳು ಸೇರುತ್ತಾರೆ.ಬಹುತೇಕವಾಗಿ ಬೆಂಗಳೂರಿನಿಂದ ಹೆಚ್ಚಾಗಿ ಬರುತ್ತಾರೆ.ಈ ವಲೀರವರ ಉರುಸ್ ಸಂದರ್ಭದಲ್ಲಿಯೇ ಅವರ ತಂಗಿಯಾದ ಸಾಜೀದಾಬೀಬೀರವರಿಗೂ ಗಂಧ ಹತ್ತಿಸಲಾಗುವುದು.ಸಾಜೀದಾಬೀಬೀರವರನ್ನು "ವಲೀ"ರವರ ಖಡ್ಗದಿಂದ ಕತ್ತರಿಸಿದರು.ಎಂಬ ಜನಪದ ನಂಬಿಕೆ ಇದೆ.ಇವರ ಸಮಾಧಿಯ ಮುಂದಿನ ಆವರಣದಲ್ಲಿ ಅವರೊಂದಿಗೆ ಇದ್ದ, ಅವರ ಸ್ನೇಹಿತರ ಮೂರು ಸಮಾಧಿಗಳನ್ನು ಕಾಣಬಹುದಾಗಿದೆ.

**ಈ ದರ್ಗಾ ಐತಿಹ್ಯ**

ವಲೀರವರ ಮೇಲೆ ಅನೇಕ ಐತಿಹ್ಯಗಳು ಮತ್ತು ಜನಪದ ಕಥೆಗಳು ಜನಪ್ರಚಲಿತಗೊಂಡಿವೆ ಒಂದು ದಿನ ಕೃಷ್ಣರಾಜ ಒಡೆಯರ್ ಸೇನಾಧಿಪತಿಯು ಹುಣಸನಹಳ್ಳಿ ಮಾರ್ಗವಾಗಿ ತಮಿಳುನಾಡಿಗೆ ಹೋಗುತ್ತಿರುವಾಗ ಪಟೇರದೊಡ್ಡಿಯಲ್ಲಿದ್ದ ಗುಡಿಸಲಿನಲ್ಲಿ ನೀರಿನ ದಾಹವನ್ನು ತೀರಿಸಿಕೊಳ್ಳಲು ಹೋದನಂತೆ, ಆಗ ವಲೀರವರು ನೀರು ಕೊಟ್ಟು, ನೀನು ಎಲ್ಲಿಗೆ ಹೋಗುತ್ತಿದ್ದೀಯಾ ಎಂದು ಕೇಳಿದರಂತೆ, ಆಗ ಆ ಸೈನಿಕ ನಾನು ತಮಿಳುನಾಡಿಗೆ ಹೋಗುತ್ತಿರುವೆ ನನ್ನ ತಂಗಿಗೆ ತುಂಬಾ ಹೊಟ್ಟೆ ನೋವು ಹೆಚ್ಚಾಗಿದೆಯಂತೆ ಅದಕ್ಕೆ ಹೋಗುತ್ತಿದ್ದೇನೆ. ಎಂದು ಹೇಳಿದಾಗ "ವಲೀ" ರವರು ಅವನಿಗೆ ಒಂದು ಹಣ್ಣನ್ನು ಕೊಟ್ಟು ಕಳುಹಿಸಿದರಂತೆ ಅದನ್ನು ಸೇವಿಸಿದ ಸೈನಿಕನ ತಂಗಿಗೆ ಹೊಟ್ಟೆ ನೋವು ಕಡಿಮೆಯಾಗಿ ಸಂಪೂರ್ಣವಾಗಿ ಗುಣಮುಖಳಾದಳಂತೆ, ಇದನ್ನು ನೋಡಿದ ಸೈನಿಕ ಹಿಂದುರುಗಿ ಬರುವಾಗ ಪಟೇಲರದೊಡ್ಡಿಯಲ್ಲಿ ಕುದುರೆಯನ್ನು ನಿಲ್ಲಿಸಿ ನಮ್ಮ ಕೃಷ್ಣರಾಜ ಒಡಯರಿಗೂ ಇದೇ ರೀತಿಯ ಹೊಟ್ಟೆ ನೋವು ಬಹಳ ವರ್ಷಗಳಿಂದ ಇದೆ. ಎಂದು ಆ "ವಲೀ"ಯ ಹತ್ತಿರ ಬಂದು ನೀವು ನಮ್ಮ ಒಡೆಯರಿಗೂ ದಯಮಾಡಿ ಔಷಧ ಕೊಡಬೇಕೆಂದು ಕೇಳಿಕೊಂಡಾಗ "ವಲೀ"ರವರು ಆತನಿಗೆ ಗುಲೇಹೇರಿ ಹಣ್ಣನ್ನು ಕೊಟ್ಟರು.ಅದನ್ನು ಸೈನಿಕನು ಒಡೆಯನಿಗೆ ತಂದುಕೊಟ್ಟನು.ಒಡೆಯನು ಆ ಹಣ್ಣನ್ನು ಸೇವಿಸಿದರು.ಬಹುದಿನಗಳಿಂದಿದ್ದ ಹೊಟ್ಟೆ ನೋವು ಮಾಯವಾಗಿ ಗುಣಮುಖರಾದರು.ಸೈನಿಕನಿಂದ ಹಣ್ಣು ಕೊಟ್ಟ ವ್ಯಕ್ತಿಯ ಬಗ್ಗೆ ತಿಳಿದು ಒಡೆಯರು

ಪಟೇಲರದೊಡ್ಡಿಗೆ ಬಂದು "ವಲೀ" ರವರಿಗೆ 5 ಎಕರೆ ಭೂಮಿಯನ್ನು ದಾನವಾಗಿ ಕೊಟ್ಟರು.ಅದರಲ್ಲಿ ಈಗ ಒಂದು ಎಕರೆ ಮಾತ್ರ ಉಳಿದಿದೆ.ಇನ್ನು ಉಳಿದ ನಾಲ್ಕು ಎಕರೆಯನ್ನು ಅಕ್ಕಪಕ್ಕದ ಜಮೀನುದಾರರು ಒತ್ತರಿಸಿಕೊಂಡಿದ್ದಾರೆ.ಎಂಬ ಕಥೆ ಜನಪದರಲ್ಲಿ ಕೇಳಿ ಬರುತ್ತದೆ.

ಇನ್ನೊಂದು ಜನಪದ ಕಥೆಯ ಮೂಲಕ ಇವರ ಪರಾಕ್ರಮವನ್ನು ತಿಳಿಸುತ್ತಾರೆ. ಹೊಸದುರ್ಗಾ ಬೆಟ್ಟದಲ್ಲಿ ರಾಕ್ಷಸರು ಇದ್ದರು. ಇವರು ಹುಟ್ಟಿದ ಮಕ್ಕಳು ಮತ್ತು ದನ ಕಾಯುವವರು ಅಲ್ಲಿಗೆ ಹೋದರೆ ಅವರನ್ನು ಸಾಯಿಸುತ್ತಿದ್ದರಂತೆ, ಇದನ್ನು ಸಹಿಸದ ವಲೀರವರು ರಾಕ್ಷಸರನ್ನು ಸಂಹರಿಸಿ ಬೆಟ್ಟದ ಮೇಲೆ ಯಾವುದೇ ಭಯವಿರದಂತೆ ಮಾಡಲು ರಾಮವನವಾಸದಲ್ಲಿ ಇಲ್ಲಿ ನೆಲೆಸಿದ್ದ ಎಂಬ ನಂಬಿಕೆಯಿಂದ ಅವರ ಮಂದಿರವನ್ನು ಕಟ್ಟಿಸಿ ಎಂದು ಹೇಳಿ ಪಟೇಲರದೊಡ್ಡಿಗೆ ಬಂದರಂತೆ ಎಂದು ಜನಪದ ಕಥೆಗಳಿವೆ. ಯಾವುದೇ ಸಮುದಾಯದ ಭೇದ ಭಾವವಿಲ್ಲದೇ ಎಲ್ಲಾ ಸಮುದಾಯದವರು ಈ ವಲೀರವರ ದರ್ಗಾಕ್ಕೆ ಬಂದು ತಮ್ಮ ಕಷ್ಟಗಳನ್ನು ನಿವಾರಿಸುವ ಹಾಗೆ ಬೇಡಿಕೊಳ್ಳುತ್ತಾ ಹರಕೆಯನ್ನು ಕಟ್ಟಿಕೊಂಡು ಹೋಗುತ್ತಾರೆ. ಹೀಗೆ ಅನೇಕ ಐತಿಹ್ಯಗಳಿಂದ ಹಜರತ್ ಯುಸೂಫ್ ಅಲಿ ಷಾ ಖಾದ್ರಿ ದರ್ಗಾವು ಪ್ರಸಿದ್ದತೆಯನ್ನು ಪಡೆದುಕೊಂಡಿದೆ.

**ಹೂಕುಂದ**

**ಹಜರತ್ ಸೈಯ್ಯದ್ ಯಖೀನ್ ಷಾ ಖಾದ್ರಿ**

**ಹಜರತ್ ಸೈಯ್ಯದ್ ಮಹಮ್ಮದ್ ಷಾ ಖಾದ್ರಿ**

ಕನಕಪುರದಿಂದ ಮುಳ್ಳಳ್ಳಿ ಮಾರ್ಗ ಮಧ್ಯದಲ್ಲಿರುವ ಹೂಕುಂದದಲ್ಲಿ ಎರಡು ದರ್ಗಗಳಿವೆ. ಕನಕಪುರದಿಂದ 20 ಕಿಮೀ ದೂರದಲ್ಲಿರುವ ಹೂಕುಂದದ ಪ್ರವೇಶವಾಗುವ ಮೊದಲೇ ಎಡಭಾಗಕ್ಕಡ ಒಂದು ದನದ ಓಣಿ ಸಿಗುತ್ತದೆ.ಆ ಓಣಿಯಲ್ಲಿ ಸ್ವಲ್ಪ ದೂರ ನಡೆದುಕೊಂಡು ಹೋದರೆ ಅಲ್ಲಿಯೇ ಹಜರತ್ ಸಯ್ಯದ್ ಯಖೀನ್ ಷಾ ಖಾದ್ರಿಯವರ ದರ್ಗಾವಿದೆ.

ಈ ದರ್ಗಾದಲ್ಲಿ ಐಕ್ಯರಾಗಿರುವರು ಸುಮಾರು 300 ವರ್ಷಗಳ ಹಿಂದೆ ಅರಬ್ ದೇಶದಿಂದ ಬಂದವರು ಎಂದು ಅಲ್ಲಿನ ಮುರ್ಷದ್ ತಿಳಿಸುತ್ತಾರೆ.41 ವರ್ಷದ ಉರುಸ್ 30–7–2015 ರಂದು ಗುರುವಾರ ನಡೆಯಿತು.ಎಲ್ಲಾ ದರ್ಗಾಗಳಂತೆಯೇ ಉರುಸ್‌ನ ಮೊದಲೇ ದರ್ಗಾವನ್ನು ಸ್ವಚ್ಛಗೊಳಿಸಲಾಗುತ್ತದೆ.ತದನಂತರ ದರ್ಗಾಕ್ಕೆ ಬಣ್ಣದ ಪ್ಲಾಸ್ಟಿಕ್ ಕಾಗದಗಳಿಂದ ಹಾಗೂ ವಿದ್ಯುತ್ ದೀಪಾಲಂಕಾರವನ್ನು ಮಾಡಲಾಗುತ್ತದೆ. ಉರುಸ್ ಊರಿನ ಪ್ರಮುಖ

ಬೀದಿಗಳಲ್ಲಿ ಮೆರವಣಿಗೆಯಿಂದ ಬಂದು ಊರಿನ ರಸ್ತೆಯಲ್ಲಿಯೇ ಇರುವ ಇವರ ಅಣ್ಣ ಹಜರತ್ ಮಹಮ್ಮದ್ ಷಾ ಖಾದ್ರಿಯವರಿಗೆ ಮೊದಲು ಗಂಧವನ್ನು ಹಚ್ಚಲಾಗುತ್ತದೆ.ನಂತರ ತಮ್ಮರಾದ ಹಜರತ್ ಸೈಯ್ಯದ್ ಯಖೀನ್ ಷಾ ಖಾದ್ರಿಯವರಿಗೆ ಗಂಧ ಹಚ್ಚಲಾಗುತ್ತದೆ.ಹೀಗೆ ಬಹಳ ವಿಜೃಂಭಣೆಯಿಂದ ಈ ಆಚರಣೆ ನಡೆಯುತ್ತದೆ.ಈ ಆಚರಣೆಗೆ ಸುತ್ತ-ಮುತ್ತಲಿನ ಭಕ್ತಾದಿಗಳು ಸುಮಾರು ಎರಡುವರೆ ಸಾವಿರ ಜನರು ಸೇರುತ್ತಾರೆ, ಈ ಹೂಕುಂದದಲ್ಲಿ ಮುಸ್ಲಿಮರ 16 ಹಾಗೂ ಇತರೆ 300 ಕುಟುಂಬಗಳಿವೆ. ಇದರಲ್ಲಿ ಮುಸ್ಲಿಮರು 100 ಜನ ನೆಲೆಸಿದ್ದಾರೆ.700 ಜನ ಅನ್ಯ ಧರ್ಮೀಯರು ವಾಸವಾಗಿದ್ದಾರೆ.ಜನಸಂಖ್ಯೆಯಲ್ಲಿ ಅನ್ಯ ಸಮುದಾಯದವರೇ ಹೆಚ್ಚಾಗಿದ್ದರೂ ಸಹಬಾಳ್ವೆಯಿಂದ :ವಲೀ; ರವರ ಉರುಸ್‌ನಲ್ಲಿ ಉರುಸ್‌ನಲ್ಲಿ ಒಂದಾಗಿ ಉರುಸ್ ಆಚರಿಸುತ್ತಾ ವರ್ಷದಿಂದ ವರ್ಷಕ್ಕೆ ದರ್ಗಾ ಅಭಿವೃದ್ಧಿಯಾಗುತ್ತಿರುವುದನ್ನು ಕಾಣಬಹುದಾಗಿದೆ. ಈ ದರ್ಗಾದ ಉರುಸ್‌ನ ಬಹುತೇಕ ವೆಚ್ಚವನ್ನು ಊರಿನ ಮುಸ್ಲಿಂ ಸಮುದಾಯದ ಮುಖಂಡರಾದ ಇಕ್ಬಾಲ್ ಹುಸೇನ್ ರವರು ಭರಿಸುತ್ತಾರೆ.ಹೀಗೆ ಈ ಎರಡು ದರ್ಗಾಗಳ ಉರುಸ್ ಬಹಳ ಅರ್ಥ ಪೂರ್ಣವಾಗಿ ಆಚರಿಸಲ್ಪಡುತ್ತದೆ.

### ಮರಿಗೌಡನದೊಡ್ಡಿ

#### ಹಜರತ್ ಸೈಯ್ಯದ್ ರೋಷನ್ ಅಲಿ ಷಾ ಖಾದ್ರಿ

ಕನಕಪುರದಿಂದ ಕೋಟೆಕೊಪ್ಪ ಊರಿಗೆ ಹೋಗುವ ದಾರಿಯಿಂದ ಬಲಭಾಗಕ್ಕೆ ಎರಡು ಕಿ.ಮೀ ದೂರದಲ್ಲಿರುವ ಮರೀಗೌಡನದೊಡ್ಡಿ ಕನಕಪುರದಿಂದ 30 ಕಿ.ಮೀ ದೂರದಲ್ಲಿದೆ. ಈ ದರ್ಗಾವು ಮರಿಗೌಡನದೊಡ್ಡಿ ಊರಿನಿಂದ ಹೊರಗಡೆ ಇರುವುದರಿಂದ ಹಾಗೂ ಆ ದೊಡ್ಡಿಯಲ್ಲಿ ಮುಸ್ಲಿಂ ಸಮುದಾಯದವರು ಇಲ್ಲದಿರುವುದರಿಂದ ಹೆಚ್ಚಿನ ಮಾಹಿತಿ ದೊರೆಯಲಿಲ್ಲ.

ನಾನು ಕ್ಷೇತ್ರ ಕಾರ್ಯಕ್ಕೆ ಹೋಗಿದ್ದಾಗ ಅಲ್ಲಿ ಯಾರೂ ಇರಲಿಲ್ಲ. ದನಗಳನ್ನು ಮೇಯಿಸುತ್ತಿದ್ದ ರೇವಣ್ಣರವರಿಗೆ ಕೇಳಿದಾಗ ವರ್ಷದಲ್ಲಿ ಒಂದು ಸಲ ಗಂಧ ನಡೆಯುತ್ತದೆ.ಆಗ ಮಾತ್ರ ಜನ ಸೇರುತ್ತಾರೆ.ಈಗ ಯಾರು ಇಲ್ಲ. ನಿಮ್ಮ ಹಾಗೆ ಬಂದವರು ಪೂಜೆ ಮಾಡಿಕೊಂಡು ಹೋಗುತ್ತಾರೆ.ಇವರ ದರ್ಗಾ ಸುಮಾರು 30 ವರ್ಷದಿಂದ ಇದೆ ಎಂದು ಹೇಳಿದರು.ಊರಿನಲ್ಲಿ ಬಂದು ಕೇಳಿದಾಗ ಹಲವಾರು ಜನಪದ ಕಥೆಗಳು ಮರಿಗೌಡನದೊಡ್ಡಿಯ ಹಜರತ್ ಸೈಯ್ಯದ್ ರೋಷನ್ ಅಲಿ ಷಾ ಖಾದ್ರಿ ಬಗ್ಗೆ ಇವೆ ಎಂದು ತಿಳಿದು ಬರುತ್ತದೆ.

## ಸಾತನೂರು



### ಹಜರತ್ ಸಯ್ಯದ್ ಖರೀಬುಲ್ಲಾ ಷಾ ಖಾದ್ರಿ

ಹಜರತ್ ಸೈಯ್ಯದ್ ಖರೀಬುಲ್ಲಾ ಷಾ ಖಾದ್ರಿಯವರ ದರ್ಗಾವು ಕನಕಪುರ ಮೈಸೂರು ಹೆದ್ದಾರಿಯಲ್ಲಿ ಕನಕಪುರದಿಂದ 12 ಕಿ.ಮೀ ದೂರದಲ್ಲಿರುವ ಸಾತನೂರು ಹೋಬಳಿಯಲ್ಲಿ ಮುಸ್ಲಿಮರ ಮಕಾನ್‌ನಲ್ಲಿ ಇರುವ ದರ್ಗಾ ಇದಾಗಿದೆ. ಇವರು 150 ವರ್ಷಗಳ ಹಿಂದೆ ಇದ್ದವರೆಂದು ಹೇಳಲಾಗುತ್ತದೆ.ಇವರು ಮತ್ತು ಸಾಸಲಾಪುರದಲ್ಲಿ ಐಕ್ಯರಾಗಿರುವ ಹಜರತ್ ಸೈಯ್ಯದ್ ಮಹಬತುಲ್ಲಾ ಷಾ ಖಾದ್ರಿಯವರು ಅಣ್ಣ–ತಮ್ಮಂದಿರು ಆಗಿದ್ದಾರೆ.ಸಾತನೂರಿನಲ್ಲಿ ಐಕ್ಯರಾಗಿರುವ "ವಲೀ" ರವರ ಉರುಸ್‌ನನ್ನು 60 ವರ್ಷದಿಂದ ಆಚರಿಸುತ್ತಾ ಬಂದಿದ್ದಾರೆ.ಪ್ರತಿ ವರ್ಷವು ನವೆಂಬರ್ ತಿಂಗಳಿನಲ್ಲಿ ನಡೆಯುತ್ತದೆ.ಈ ಉರುಸ್ ಕೂಡ ಇತರೆ ದರ್ಗಾಗಳ ರೀತಿಯಲ್ಲಿ ಬಹಳ ಸಂಭ್ರಮದಿಂದ ನಡೆಯುತ್ತದೆ.ಪ್ರಮುಖ ಬೀದಿಗಳಲ್ಲಿ ಉರುಸ್ ಮೆರವಣಿಗೆಯಿಂದ ಬಂದು "ವಲೀ" ರವರಿಗೆ ಗಂಧವನ್ನು ಏರಿಸುತ್ತಾರೆ. ಹಾಗೂ ಹೂವಿನ ಚಾದರ್, ಬಟ್ಟೆಯ ಹಸಿರು ಚಾದರ್‌ನನ್ನು ಹೊದಿಸುತ್ತಾರೆ. ಇವರ ಶಿಷ್ಯರ ಸಮಾಧಿಗಳಿಗೂ ಕೂಡ ಗಂಧವನ್ನು ಹಚ್ಚುತ್ತಾರೆ.ಸಮಾಧಿಯ ಸುತ್ತ ಸುಗಂಧ ದ್ರವ್ಯವನ್ನು ಹಾಕುತ್ತಾರೆ.

ಈ ದರ್ಗಾದ ಬಳಿ ನೂರುಲ್ಲಾ ಷರೀಫ್ ಮುರ್ಷದ್‌ರವರು ಬಂದ ಭಕ್ತಾದಿಗಳಿಗೆ ಫಾತೇಹ ಓದಿಸುತ್ತಾರೆ.ಇಲ್ಲಿಗ ಬಂದ ಭಕ್ತಾದಿಗಳು ಸಕ್ಕರೆ, ಬೆಲ್ಲ, ಹುರಿಕಡಲೆಯನ್ನು ತಂದು ಫಾತೇಹ ಓದಿಸುತ್ತಾರೆ.ಪ್ರತಿ ಶುಕ್ರವಾರ ಹೆಚ್ಚಿನ ಭಕ್ತಾದಿಗಳು ಬರುತ್ತಾರೆ.ಇಂತಹ ಭಕ್ತಾದಿಗಳಲ್ಲಿ ಅನ್ಯ ಧರ್ಮೀಯರೇ ಹೆಚ್ಚಾಗಿ ಬರುವುದು.ಈ ದರ್ಗಾದ ವಿಶೇಷವಾಗಿದೆ.ಈ ದರ್ಗಾದ ಹತ್ತಿರ ಬಂದವರು ಮುರ್ಷದ್‌ರವರಿಂದ ತಾವೀಜ್ ಕಟ್ಟಿಸಿಕೊಳ್ಳುತ್ತಾರೆ.



ಮಕ್ಕಳು ಖಾಯಿಲೆಯಿಂದ ನರಳುತ್ತಿರುವಾಗ ಅವರು ಮಂತ್ರಿಸಿದ ನೀರು ಕುಡಿದರೆ ಮಕ್ಕಳಿಗೆ ಬೇಗ ಗುಣವಾಗುತ್ತದೆ ಎಂದು ನಂಬುತ್ತಾರೆ.ತಾವಿಜ್‌ನ್ನು ಬಹಳ ಮುಸ್ಲಿಮರ ಕುತ್ತಿಗೆಯಲ್ಲಿ ಹಾಕಿರುತ್ತಾರೆ. ಅದು ಹಸಿರು ಬಟ್ಟೆಯಲ್ಲಿ ಕುರಾನಿನ ಶ್ಲೋಕವನ್ನು ಬರೆದು ತಗಡಿನಿಂದ ಮಾಡಿ ಅದರ ಸುತ್ತಲು ಹಸಿರು ಬಟ್ಟೆಯಿಂದ ತಯಾರಾಗುತ್ತದೆ.ಭಕ್ತಾದಿಗಳು ಬಹಳ ಗೌರವದಿಂದ ನಂಬಿಕೆಯಿಂದ ತಮ್ಮ ದೇಹದ ತೋಳು, ಕೊರಳು ಅಥವಾ ಸೊಂಟಕ್ಕೆ ಕಟ್ಟಿಕೊಳ್ಳುತ್ತಾರೆ.ಈ ದರ್ಗಾದ ಉರುಸ್‌ಗೆ ಸುಮಾರು ಒಂದು ಸಾವಿರದ ಜನರು ಸೇರುತ್ತಾರೆ.ಸಾತನೂರು ಗ್ರಾಮದಲ್ಲಿ 70 ಮುಸ್ಲಿಂ ಕುಟುಂಬಗಳಿವೆ. ಉಳಿದೆಲ್ಲವೂ ಅನ್ಯ ಧರ್ಮದ ಕುಟುಂಬಗಳು ಸುಮಾರು ಒಂದು ಸಾವಿರ ಮನೆಗಳಿವೆ. ಒಟ್ಟು 10,000 ಜನಸಂಖ್ಯೆಯಲ್ಲಿ ಮುಸ್ಲಿಂ ಸಮುದಾಯದವರು 600 ಜನ ಉಳಿದವರು ಬೇರೆ ಬೇರೆ ಧರ್ಮಕ್ಕೆ ಸೇರಿದವರಾಗಿದ್ದಾರೆ.

ಇಡೀ ಕನಕಪುರ ತಾಲ್ಲೂಕಿನಲ್ಲಿ ಕನಕಪುರ ಹೊರತುಪಡಿಸಿದರೆ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಮುಸ್ಲಿಂಮರು ಸಾತನೂರಿನಲ್ಲಿ ಕಂಡುಬರುತ್ತಾರೆ. ಹೀಗೆ ಅನೇಕ ರೀತಿಯ ಐತಿಹಾಸಿಕ ಹಿನ್ನೆಲೆಯ ನೆಲೆಯಾಗಿರುವ ಸಾತನೂರು ಸಾಂಸ್ಕೃತಿಕವಾಗಿಯು ತನ್ನದೇಯಾದಕೊಡುಗೆಯನ್ನು ನೀಡುವ ಮೂಲಕ ಪ್ರಸಿದ್ಧತೆಯನ್ನು ಪಡೆದುಕೊಂಡಿದೆ.

**ತಿಮ್ಮಸಂದ್ರ**

**ಹಜರತ್ ಇಜಹಾರ್ ಅಲಿ ಷಾ ಚಷ್ತಿ**

**ಹಜರತ್ ಸೈಯ್ಯದ್ ಖಾದರ್ ವಲೀ ಷಾ ಖಾದ್ರಿ**

**ಇಮಾಮ್ ಷಾ ವಲೀ ಷಹೀದ್ (ಬಾಗ್ ಮಾರೆಪೀರ್)**

**ಹಜರತ್ ತವಕ್ಕಲ್ ಸೈಯ್ಯದ್ ಮೊಹಮ್ಮದ್ ಅಬುಬಕ್ಕರ್ ಮದನಿ.**

**ಹಜರತ್ ಇಜಹಾರ್ ಅಲಿ ಷಾ ಚಷ್ತಿ**

ಕನಕಪುರ ರಾಮನಗರ ಮಾರ್ಗದ ರಸ್ತೆಯಲ್ಲಿರುವ ತಿಮ್ಮಸಂದ್ರವು ಕನಕಪುರದಿಂದ 14 ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಮುಸ್ಲಿಮರ ಮಕಾನ್‌ನಲ್ಲಿ ಈ ದರ್ಗಾವಿದೆ. ಈ ವಲೀರವರ ದಿ:21–10–1969 ರಲ್ಲಿ ಐಕ್ಯರಾಗಿದ್ದಾರೆ. ಇವರ ಉರುಸ್‌ನನ್ನು 46 ವರ್ಷಗಳಿಂದ ಶಾಬಾನ್ ತಿಂಗಳಿನ 9ನೇಯ ತಾರೀಖಿನಂದು ಆಚರಿಸಲಾಗುತ್ತದೆ.ಎಲ್ಲಾ ದರ್ಗಾಗಳಂತೆಯೇ ಈ ದರ್ಗಾದಲ್ಲಿಯು ಉರುಸ್ ಆಚರಿಸಲಾಗುತ್ತದೆ ಈ ಉರುಸ್‌ಗೆ ಸುಮಾರು ಒಂದು ಸಾವಿರದಿಂದ ಒಂದು ಸಾವಿರದ ಇನ್ನೂರು ಭಕ್ತಾದಿಗಳು ಬರುತ್ತಾರೆ.

ಈ ದರ್ಗಾದ "ವಲೀ" ರವರನ್ನು ಭಕ್ತಿಯಿಂದ ನೆನೆಯುತ್ತಾ ತಮ್ಮ ಕಷ್ಟಗಳನ್ನು, ತಮ್ಮ ಬೇಡಿಕೆಗಳನ್ನು ಮನಸ್ಸಿನಲ್ಲಿ ನೆನೆಯುವುದರಿಂದ ಭಕ್ತರ ಬೇಡಿಕೆಗಳು ಈಡೇರುತ್ತಿವೆ. ಎಂದು ಜನಪದರು ನಂಬಿರುತ್ತಾರೆ.

**ಹಜರತ್ ಸಯ್ಯದ್ ಖಾದರ್ ವಲೀ ಷಾ ಖಾದ್ರಿ**

ಹಜರತ್ ಸಯ್ಯದ್ ಖಾದರ್ ವಲೀ ಷಾ ಖಾದ್ರಿಯವರು ತಿಮ್ಮಸಂದ್ರ, ಮುಸ್ಲಿಂ ಸಮುದಾಯದ ಮಕಾನ್‌ನಲ್ಲಿ ಐಕ್ಯರಾಗಿದ್ದಾರೆ. ಇವರ ಮೂಲ "ತಮಿಳುನಾಡು" ಎಂದು ಅಲ್ಲಿನ ಮುರ್ಷದ್‌ರವರಾದ ಸಯ್ಯದ್ ಮಹಮ್ಮದ್ ಷಾ ಖಾದ್ರಿಯವರು ತಿಳಿಸಿದರು.ಇವರು ರಾಮನಗರದವರಾಗಿದ್ದು, ತಿಮ್ಮಸಂದ್ರದ ಈ "ವಲೀ" ರವರ ದರ್ಗಾಕ್ಕೆ ಪ್ರತಿ ದಿನ ಬರುವ ಮೂಲಕ ದರ್ಗಾಕ್ಕೆ ಬರುವ ಭಕ್ತಾದಿಗಳಿಗೆ ವಲೀರವರ ಹೆಸರಿನಲ್ಲಿ ಫಾತೇಹ ಓದಿಸುತ್ತಾರೆ.

ಈ ದರ್ಗಾದ ಉರುಸ್ "ರಜಬ್" ನ 22,23 ರಂದು ನಡೆಯುತ್ತದೆ. ಎಂದು ಮುರ್ಷದ್ ಹೇಳಿದ ಮಾಹಿತಿಯ ಪ್ರಕಾರ ವಲೀ 200 ವರ್ಷಗಳ ಹಿಂದಿನವರೆಂದು ತಿಳಿಯಬಹುದಾಗಿದೆ.ಇವರು ತಮ್ಮ ಜೀವನದ ಅಂತ್ಯದವರೆಗೂ ಸಮಾಜ ಸೇವೆ ಮಾಡುವ ಮೂಲಕ ಸಮಾಜದ ಜನರ ಕಷ್ಟಗಳಿಗೆ ಸಹಕರಿಸುತ್ತಾ "ಅಲ್ಲಾವಲೀ" ಎಂದು ಭಕ್ತಾದಿಗಳು ಕರೆಯುತ್ತಾರೆ.

ಈ ವಲೀರವರ ಉರುಸ್ ಎಲ್ಲಾ ದರ್ಗಾಗಳಲ್ಲಿ ಆಚರಿಸುವಂತೆ ನಡೆಯುತ್ತದೆ.ಈ ದರ್ಗಾದ ಉರುಸ್‌ಗೆ ಸುತ್ತ-ಮುತ್ತಲಿನ ಹಳ್ಳಿಯ ಭಕ್ತಾದಿಗಳು ಬಂದು ವಲೀರವರ ಗಂಧದಲ್ಲಿ ಭಾಗವಹಿಸಿ ತಮ್ಮ ಕಷ್ಟ ಸಂಕಷ್ಟಗಳನ್ನು "ವಲೀ"ಯವರಲ್ಲಿ ಭಿನ್ನಹಿಸಿಕೊಂಡು ಹರಕೆ ಮಾಡಿಕೊಳ್ಳುತ್ತಾರೆ.ಇಲ್ಲಿಗೆ ಬರುವ ಭಕ್ತಾದಿಗಳು ಗಂಧದ ಕಟ್ಟಿ ತಂದು ವಲೀರವರ ಸಿರಾನೆ ಹತ್ತಿಸುತ್ತಾರೆ.ಯಾವಾಗಲೂ ವಲೀರವರ ತಲೆಯ ಕಡೆ ತುಪ್ಪದ ಅಥವಾ ಎಣ್ಣೆಯ ದೀಪ ಉರಿಯುತ್ತಲೇ ಇರುತ್ತದೆ.ಉರುಸ್ ಸಂದರ್ಭದಲ್ಲಿ ಸುಮಾರು ಆರನೂರಿಂದ ಒಂದುಸಾವಿರ ಭಕ್ತಾದಿಗಳು ಸೇರುತ್ತಾರೆ. ಬಂದ ಭಕ್ತಾದಿಗಳಿಗೆ ಊಟದ ವ್ಯವಸ್ಥೆ ಮಾಡಲಾಗುತ್ತದೆ. ಇಡೀ ರಾತ್ರಿ ಪ್ರಸಿದ್ಧ "ಖವಾಲಿ" ಗಾಯಕರನ್ನು ಕರೆಸಿ, ವಲೀಯವರ ಮತ್ತು ಮಹಮ್ಮದ್ ಪೈಗಂಬರ್ ಹಾಗೂ ಅಲ್ಲಾನ ನಾಮವನ್ನು ನೆನೆಯುತ್ತಾ ಹಾಡಿನ ಜೊತೆಗೆ " ಶಾಯೇರಿ" ಕೂಡೂ ಮಾಡಲಾಗುತ್ತದೆ. ಹೀಗೆ ವಲೀಯವರ ಉರುಸ್ ಬಹಳ ಭಕ್ತಿ ಗೌರವಗಳಿಂದ ನಡೆಯುತ್ತದೆ.

**ಇಮಾಮ್ ಷಾ ವಲೀ ಷಹೀದ್**

ಇಮಾಮ್ ಷಾ ವಲೀ ಷಹೀದ್‌ರವರ ದರ್ಗಾವು ತಿಮ್ಮಸಂದ್ರದ ಊರಿನ ಒಳಭಾಗದಲ್ಲಿರುವ ಹಜರತ್ ತವಕ್ಕಲ್ ಸಯ್ಯದ್ ಮೊಹಮ್ಮದ್ ಅಬುಬಕ್ಕರ್ ಮದನಿ ರವರ ದರ್ಗಾದ ಹಿಂಭಾಗದ ಹೊಲದಲ್ಲಿದೆ.ಈ ವಲೀರವರು ಸುಮಾರು 100 ವರ್ಷಗಳ ಹಿಂದಿನವರೆಂದು ತಿಳಿದು ಬರುತ್ತದೆ.ವಲೀರವರು ಈ ಊರಿನಲ್ಲಿ ಸಮಾಜ ಸೇವೆಯನ್ನು ಮಾಡುತ್ತಾ ಸಮಾಜದ ಸಮಾನತೆಯನ್ನುಬಯಸುತ್ತಾ ಎಲ್ಲಾಸಮುದಾಯದವರ ಮೆಚ್ಚುಗೆಗೆ ಪಾತ್ರರಾದ ವಲೀರವರ ಉರುಸ್‌ನನ್ನು ರಜಬ್ ತಿಂಗಳ 21, 22 ರಂದು ನಡೆಯುತ್ತದೆ.ಈ ಉರುಸ್ ಕನಕಪುರದ ಎಲ್ಲಾ ದರ್ಗಾಗಳ ರೀತಿಯಲ್ಲಿಯೇ ನೆರವೇರಿಸಲಾಗುತ್ತದೆ.ಭಕ್ತಾದಿಗಳು ತಮ್ಮ ಕಷ್ಟ, ಸಂಕಟ, ನೋವು ಸಮಸ್ಯೆಗಳನ್ನು ವಲೀರವರಿಗೆ ಫಾತೇಹ ಮಾಡಿಸುವ ಮೂಲಕ ಮನಸ್ಸಿನಲ್ಲಿಯೇ ಹರಕೆಗಳನ್ನು ಮಾಡಿಕೊಳ್ಳುತ್ತಾರೆ.ಇದನ್ನು ತಿಳಿಯುವ ವಲೀರವರು ನಮ್ಮ ನಾನಾ ರೀತಿಯ ಸಮಸ್ಯೆಗಳನ್ನು ನಿವಾರಿಸುತ್ತಾರೆ.ಎಂಬ ನಂಬಿಕೆಯನ್ನು ಇಲ್ಲಿಗೆ ಬರುವ ಜನಪರು ನಂಬುತ್ತಾರೆ.

ಈ ವಲೀರವರ ಸಾವಿನ ಬಗ್ಗೆ ಭಕ್ತಾದಿಗಳು ಹೀಗೆ ಹೇಳುತ್ತಾರೆ. * ಒಂದು ದಿನ ತಿಮ್ಮಸಂದ್ರದ ಬೆಟ್ಟದಿಂದ ಹುಲಿ ಒಂದು ಊರಿಗೆ ಬಂದು ಭಕ್ತರಿಗೆ ತೊಂದರೆಯನ್ನು ನೀಡುತ್ತಿತ್ತು. ಆಗ ಈ ವಲೀರವರು ಆ ಹುಲಿಯೊಡನೆ ಹೋರಾಟ ಮಾಡಿ "ಹುಲಿ" ಮತ್ತು "ವಲೀ" ಇಬ್ಬರು ಸಾವನ್ನಪ್ಪಿದರು.ಆದ ಕಾರಣ ಇವರನ್ನು "ಬಾಗ್‌ಮಾರ್‌ಪೀರ್" ಎಂದು ಕರೆಯಲಾಗುತ್ತದೆ.ಅವರು ಹುಲಿಯೊಂದಿಗೆ ಹೋರಾಟ ಮಾಡಿ ಸಾವನ್ನಪ್ಪಿದ ಸ್ಥಳದಲ್ಲಿಯೇ ಇವರ ಸಮಾಧಿ ಇದ್ದು, ಆ ಸಮಾಧಿಯೇ ದರ್ಗಾವಾಗಿದೆ. ಹೀಗೆ ಈ ವಲೀರವರು ಹುಲಿಯನ್ನುಇರಿದು ಸಾಯಿಸಿ ತಿಮ್ಮಸಂದ್ರ ಜನರಿಗೆ ಹುಲಿಯ ಕಾಟವನ್ನು ತಪ್ಪಿಸಿದ ಮಹಾನ್ ಪವಾಡ ಪುರುಷರು ಎಂದು ತಿಳಿದು ಅಂದಿನಿಂದ ಇಂದಿನವರೆಗೂ ಉರುಸ್ ಮತ್ತು ಶುಕ್ರವಾರ ಫಾತೇಹವನ್ನು ಮಾಡುತ್ತಾ ಬಂದಿದ್ದಾರೆ.

**ಹಜರತ್ ತವಕ್ಕಲ್ ಸಯ್ಯದ್ ಮಹಮ್ಮದ್ ಅಬುಬಕ್ಕರ್ ಮದನಿ.**

ಹಜರತ್ ತವಕ್ಕಲ್ ಸಯ್ಯದ್ ಮೊಹಮ್ಮದ್ ಅಬುಬಕ್ಕರ್‌ಮದನಿ ದರ್ಗಾವು ತಿಮ್ಮಸಂದ್ರದ ಊರಿನ ಪಕ್ಕ ಒಂದು ದೊಡ್ಡಿಯಲ್ಲಿ ಬಂಡೆ ಇದೆ, ಆ ಬಂಡೆಯ ಮೇಲೆ ನಿರ್ಮಾಣಗೊಂಡಿರುವ ದರ್ಗಾವೇ ಹಜರತ್ ತವಕ್ಕಲ್ ಸಯ್ಯದ್ ಮಹಮ್ಮದ್ ಅಬುಬಕ್ಕರ್ ಮದನಿ ದರ್ಗಾ. ಈ ದರ್ಗಾದಲ್ಲಿ ಐಕ್ಯರಾಗಿರುವ "ವಲೀ"ರವರು 2002 ರಲ್ಲಿ ಜೀವಂತವಾಗಿ ಸಮಾಧಿಯಾದರು.ಇವರು ಬಾಲ್ಯಜೀವನದಿಂದಲೇ ಲೌಖಿಕ ಸಂಬಂಧವನ್ನು ಕಳೆದುಕೊಳ್ಳುವ ಗುಣಗಳನ್ನು ಬೆಳೆಸಿಕೊಳ್ಳುತ್ತಾ ಇವರು ತನ್ನ ತಂದೆ ತಾಯಿ ಶಾಲೆಗೆ ಕಳುಹಿಸಿದರೆ ಇವರು ಬಂದು ಮರದ ಕೆಳಗೆ ಕುಳಿತು ದ್ಯಾನ ಮಾಡುತ್ತಾ ಶಾಲೆಯನ್ನು ತ್ಯಜಿಸಿದರು.ತಂದೆ-ತಾಯಿ ಶಾಲೆಗೆ ಹೋಗಿದ್ದ ಎಂದು ಕೇಳಿದಾಗ ಹೋಗಿದ್ದೆಂದು ಹೇಳುತ್ತಿದ್ದರಂತೆ, ತಂದೆ ತಾಯಿ ಅವರು ಸಹಪಾಠಿಗಳನ್ನು ಕೇಳಿದಾಗ ಶಾಲೆಗೆ ನಿಮ್ಮ ಮಗ ಬರಲಿಲ್ಲ. ಎಂದು ಹೇಳುತ್ತಿದ್ದರಂತೆ, ಆಗ ತಂದೆ ನೀನು ಶಾಲೆಗೆ ಹೋಗಿದ್ದರೆ ಈ ದಿನ ಶಾಲೆಯಲ್ಲಿ ಶಿಕ್ಷಕರು ಯಾವ-ಯಾವ ಪಾಠಗಳನ್ನು ಭೋದಿಸಿದರು.ಎಂದು ಪ್ರಶ್ನೆ ಮಾಡಿದಾಗ "ವಲೀ" ರವರು ಶಾಲೆಯಲ್ಲಿ ಮಾಡಿದ ಪಾಠಗಳ ಬಗ್ಗೆ ಉತ್ತರಿಸುತ್ತಿದ್ದರಂತೆ ಎಂದೋ ಒಂದೊಂದು ದಿನ ಶಾಲೆಗೆ ಹೋಗುತ್ತಿದ್ದವರು ಪರೀಕ್ಷೆಯಲ್ಲಿ ಹೆಚ್ಚಿನ ಅಂಕಗಳನ್ನು ಪಡೆಯುತ್ತಿದ್ದರಂತೆ, ಹೀಗೆ ಇವರ ಬಾಲ್ಯದ ಜೀವನದ ಬಗ್ಗೆ ಜನಪದ ಕಥೆಗಳನ್ನು ಹೇಳುತ್ತಾರೆ.ನಂತರ ಇವರು ಲೌಖಿಕ ಜಗತ್ತನ್ನು ತಿರಸ್ಕರಿಸಿ, ತಂದೆ ತಾಯಿಯಾದ ಇಜಹಾರ್ ಅಲಿ ಷಾ ಖಾದ್ರಿ ಮಹಮ್ಮದ್ ಅಬೀಜಾನ್‌ರವರಿಂದ ದೂರವಾಗಿ ಫಕೀರರಿಂದ 'ಬಯ್ಯತ್' ಪಡೆದು ಸಮಾಜದ ಸೇವೆಯಲ್ಲಿ ತೊಡಗಿಸಿಕೊಂಡು, ಲೌಖಿಕ ಬದುಕಿನಲ್ಲಿ ಬೇಸರವಾಗಿ ಜೀವಂತ ಸಮಾಧಿಯಾಗಿದ್ದಾರೆ.ಇವರು ಸಾಯುವ ಮೊದಲೇ ದರ್ಗಾದ ರೂಪು ರೇಷೆಗಳನ್ನು ನಿರ್ಮಿಸಿರುವುದು ಕಂಡು ಬರುತ್ತದೆ.

ಕನಕಪುರ ತಾಲ್ಲೂಕಿನಾದ್ಯಂತ ಇರುವ ದರ್ಗಾಗಳಲ್ಲಿ ಈ ದರ್ಗಾವು ಹಲವು ವೈಶಿಷ್ಟ್ಯತೆಗಳಿಂದ ಹಾಗೂ ವಿಭಿನ್ನವಾಗಿ ನಿರ್ಮಾಣಗೊಂಡಿದೆ.ಇಲ್ಲಿ ಐಕ್ಯರಾಗಿರುವ ವಲೀರವರು ಇರುವಾಗಲೇ, ಈದರ್ಗಾದಮುಂಬಾಗಿಲು ಆಕರ್ಷಕವಾಗಿದ್ದು, ಬಹಳ ವಿಸ್ತಾರವಾದ ಬಾಗಿಲಾಗಿದೆ.ಈ ದರ್ಗಾದಲ್ಲಿ ಕನಕಪುರ ತಾಲ್ಲೂಕಿನಾದ್ಯಂತ ಕಾಣದಾಗದಂತಹ ವಿಶಿಷ್ಠತೆಗಳಿವೆ. ದರ್ಗಾದಲ್ಲಿಯೇ ಪ್ರತ್ಯೇಕವಾದ ಜಾಗದಲ್ಲಿ ನಮಾಜ್ ಮಾಡಲು ಮಸೀದಿಯನ್ನು ಕಟ್ಟಲಾಗಿದೆ.ಮಸೀದಿಯಲ್ಲಿ ಎರಡು ಭಾಗಗಳಿವೆ.

ದರ್ಗಾಕ್ಕೆ ಹೋದ ಪ್ರಾರಂಭವಾದ ಬಲಗಡೆ ಅವರು ವಾಸಿಸುತ್ತಿದ್ದ ಮನೆಯ ಪಕ್ಕದಲ್ಲಿಯೇ, ಮಹಿಳೆಯರಿಗಾಗಿಯೇ ಮೀಸಲಾಗಿರುವ ಪ್ರಾರ್ಥನ ಮಂದಿರವಿದೆ. ಅದರ ಪಕ್ಕದಲ್ಲಿ ಪುರುಷರು ನಮಾಜ್ ಮಾಡಲು ಮಸೀದಿಯನ್ನು ಕಟ್ಟಲಾಗಿದೆ.ದರ್ಗಾದ ಒಳಗೆ ಹಾಗೆ ಹೋದರೆ ಅಡುಗೆ ಮಾಡಲು ಅಡುಗೆ ಮನೆ ಮತ್ತು ಊಟ ಮಾಡಲು ಊಟದ ಸಭಾಂಗಣ ಪ್ರತ್ಯೇಕ, ನೀರಿನ ವ್ಯವಸ್ಥೆಯ ಜೊತೆಗೆ ಬಂದ ಭಕ್ತಾದಿಗಳಿಗೆ ವಿಶಾಲ ವಾತವರಣ ಇರಲೆಂದೇ ದರ್ಗಾದ ಉಳಿದ ಜಾಗದಲ್ಲಿ ಅನೇಕ ಗಿಡಮರಗಳನ್ನು ಹಾಕಿರುವುದು ಕಂಡು ಬರುತ್ತದೆ.

ಈ ಎಲ್ಲಾ ಸಸ್ಯಗಳು, ಗಿಡಗಳು, ತೆಂಗಿನಮರಗಳು ಕಲ್ಲಿನ ಮೇಲೆಯೇ ಇರುವಂತಹ ಕೆಲವೇ ಅಡಿಗಳ ಮಣ್ಣಿನಲ್ಲಿ ಯಾವಾಗಲೂ ಹಚ್ಚ ಹಸಿರಾಗಿರುವುದು ಪವಾಡವೇ ಎನಿಸುತ್ತದೆ. ಹಾಗೆಯೇ ಮುಂದೆ ಸಾಗಿದರೆ ಮುಸ್ಲಿಂ ಸಮುದಾಯದವರು ರಂಜಾನ್ ಮತ್ತು ಬಕ್ರೀದ್‌ನಲ್ಲಿ ನಮಾಜ್ ಮಾಡಲು ಹೋಗುವ ಈದ್ಗಾ ಮೈದಾನವು ಇರುವುದು ಮತ್ತೊಂದು ವಿಶೇಷವಾಗಿದೆ. ಹೀಗೆ ಅನೇಕ ವಿಶೇಷತೆಗಳನ್ನು ಒಳಗೊಂಡಿರುವ ಈ ದರ್ಗಾ ನಿಜವಾಗಲು ಜನಪದರ ನಂಬಿಕೆ ಮತ್ತು ಸಂಪ್ರದಾಯಗಳ ಸಾಂಸ್ಕೃತಿಕ ನಂಬಿಕೆಗಳಿಗೆ ಸಾಕ್ಷಿಯಾಗಿದೆ.ಎಂದು ಹೇಳಬಹುದು.ಇಂತಹ ವೈಶಿಷ್ಟ್ಯತೆಗಳಿಂದ ಒಳಗೊಂಡಿರುವ ದರ್ಗಾದ ಉರುಸ್ "ವಲೀ"ರವರು ಅನುಗ್ರಹಿಸದರೆ ಮಾತ್ರ ನಡೆಯುತ್ತದೆ. ಹಿಂದೆ ಮೂರು ವರ್ಷಗಳ ಕಾಲ ಉರುಸ್‌ನನ್ನು ಆಚರಿಸಿಲ್ಲಾ ಎಂದರು.ಕಾರಣವೇನೆಂದು ಕೇಳಿದಾಗ "ವಲೀ" ರವರು ಅನುಮತಿ ನೀಡಲಿಲ್ಲ. ಆದ್ದರಿಂದ ಉರುಸ್ ಆಚರಿಸಲಿಲ್ಲ. ಎಂದು ಅಲ್ಲಿರುವ ಮಹಮ್ಮದ್ ಜಾಕೀರ್ ಹುಸೇನ್‌ರವರು ತಿಳಿಸುತ್ತಾರೆ.ಉರುಸ್ ಯಾವಾಗಲೂ "ವಲೀ" ರವರ ಅನುಮತಿಯಲ್ಲಿ ರಜಬ್-17ನೇ ತಾರೀಖಿನಲ್ಲಿ ಉರುಸ್ ಆಚರಿಸುತ್ತಾರೆ. ಎಲ್ಲಾ ದರ್ಗಾಗಳಂತೆಯೇ ಈ ದರ್ಗಾದಲ್ಲಿ ಎಲ್ಲಾ ರೀತಿಯ ಮೆರವಣಿಗೆ, ಹರಕೆಗಳು, ಊಟೋಪಚಾರ,ದೀಪಾಲಂಕಾರ ಹೀಗೆ ಅನೇಕ ರೀತಿಯ ಶೃಂಗಾರಗಳಿಂದ 3 ದಿನ ದರ್ಗಾದಲ್ಲಿ ಉರುಸ್ ನಡೆಯುತ್ತದೆ. ಮೂರು ದಿನವು ಊಟದ

ವ್ಯವಸ್ಥೆ ಮಾಡಲಾಗುತ್ತದೆ.ಯಾವುದೇ ಭೇದ-ಭಾವವಿಲ್ಲದೆ ಸ್ವಚ್ಛ ಮನಸ್ಸಿನಿಂದ ದರ್ಗಾಕ್ಕೆ ಹೋಗುವ ಮೊದಲು ಅಲ್ಲಿಯೇ ಇರುವ ನೀರಿನಲ್ಲಿ "ವಜ್ಞೂ" ಮಾಡಿಕೊಂಡು ಹೋಗಿ ಭಕ್ತಿಯಿಂದ ವಲೀರವರನ್ನು ನೆನೆದರೆ ತಮ್ಮ ಇಷ್ಟಾರ್ಥಗಳನ್ನು ಸಿದ್ದಿಸುತ್ತವೆ. ಎಂದು ಭಕ್ತಾದಿಗಳು ನಂಬಿದ್ದಾರೆ.

ಈ ವಲೀರವರ ಪವಾಡ ಮತ್ತು ಭಕ್ತಿಗೆ ಸಾಕ್ಷಿಯಾಗಿರುವ ಹಾಗೆ ಆ ದರ್ಗಾದ ಎಲ್ಲಾ ರೀತಿಯ ನಿರ್ವಹಣೆಯ ಹಿಂದೂ ಸಮುದಾಯದ 27 ವರ್ಷದ ಯುವಕನಾದ "ಮಹೇಶ್" ರವರು ನಿರ್ವಹಿಸುತ್ತಿರುವುದು ಗಮನಾರ್ಹ.ಸಮುದಾಯ-ಸಮುದಾಯಗಳ ನಡುವಿನ ಅಂತರವು ಹೆಚ್ಚಾಗುತ್ತಿರುವ ಸಂದರ್ಭದಲ್ಲಿ ಈ ದರ್ಗಾ ವ್ಯವಸ್ಥೆ ಸಮುದಾಯ-ಸಮುದಾಯಗಳ ನಡುವಿನ ಸ್ನೇಹ ಪ್ರೀತಿ, ಸಹಬಾಳ್ವೆ ಏಕತೆಗೆ ಸಾಕ್ಷಿಯಾಗಿದೆ.

**ಸಾಸಲಾಪುರ**

**ಹಜರತ್ ಸಯ್ಯದ್ ಮಹಬತುಲ್ಲಾ ಷಾ ಖಾದ್ರಿ**

ಹಜರತ್ ಸಯ್ಯದ್ ಮಹಬುಲ್ಲಾ ಷಾ ಖಾದ್ರಿ ದರ್ಗಾವು ಕನಕಪುರ ಮೈಸೂರು ರಸ್ತೆಯಲ್ಲಿ ಇರುವ ಸಾಸಲಾಪುರದಲ್ಲಿದೆ. ಈ ಸಾಸಲಾಪುರವು ಕನಕಪುರದಿಂದ 16 ಕಿ.ಮೀ ಸಾತನೂರಿನಿಂದ ನಾಲ್ಕು ಕಿ.ಮೀ ಅಂತರದಲ್ಲಿದೆ. ಕನಕಪುರದಿಂದ ಮೈಸೂರಿಗೆ ಹೋಗುವ 16 ಕಿ.ಮೀ ದೂರದಲ್ಲಿ ಬಲಭಾಗಕ್ಕೆ ಸಾಸಲಾಪುರದ ಹೆಬ್ಬಾಗಿಲಿದೆ. ಆ ಹೆಬ್ಬಾಗಿಲಿನಿಂದ ಒಂದು ಕಿ.ಮೀ ದೂರ ನಡೆದರೆ ಸಾಸಲಾಪುರ ಸಿಗುತ್ತದೆ. ಆ ಊರಿನ ದನದ ಓಣಿಯಲ್ಲಿ ಈ ವಲೀರವರ ದರ್ಗಾವಿದೆ.ಈ ದರ್ಗಾವು ಸುಮಾರು 100 ವರ್ಷಗಳಿಂದ ಅಭಿವೃದ್ಧಿಯಾಗಿದೆ.ಎಂದು ಅಲ್ಲಿನ ಮುರ್ಷದ್ ತಿಳಿಸುತ್ತಾರೆ.ಈ ವಲೀರವರು ಸುಮಾರು 150 ವರ್ಷಗಳ ಹಿಂದೆ ಇಲ್ಲಿ ಐಕ್ಯರಾಗಿದ್ದಾರೆ.ಎಂದು ತಿಳಿಯಲಾಗಿದೆ.ಇವರು ಸಾಸಲಾಪುರದ ಬೆಟ್ಟದ ಗವಿಯಲ್ಲಿ ತಪಸ್ಸು ಮಾಡುತ್ತಿದ್ದರೆಂದು ಹೇಳುತ್ತಾರೆ.ಈಗಲೂ ಆ ಗವಿ ಇದೆ ಎಂದು ಊರಿನ ಜನ ಹೇಳುತ್ತಾರೆ.

ಈ ದರ್ಗಾದ ಉರುಸ್ ವಲೀರವರು ಅಪ್ಪಣೆ ನೀಡಿದಾಗ ಮಾಡಲಾಗುತ್ತದೆ. ಸಾಮಾನ್ಯವಾಗಿ "ಬಂದೇ ನವಾಜ್: ತಿಂಗಳಲ್ಲಿ ನಡೆಯುತ್ತದೆ. ಈ ದರ್ಗಾದ ಉರುಸ್‌ಗೆ ಮೈಸೂರು, ಮಳ್ಳವಳ್ಳಿ, ಸಾತನೂರು, ಹಲಗೂರಿನಿಂದ ಹೆಚ್ಚಿನ ಭಕ್ತಾದಿಗಳು ಬರುತ್ತಾರೆ.ಈ ದರ್ಗಾದ ಬಲ ಭಾಗದಲ್ಲಿ ಒಂದು ದೊಡ್ಡ ಹುಣಸೆ ಮರವಿದೆ.ಈ ಮರವು ವಲೀರವರ ಕಾಲದಿಂದ ಇದೆ.ಎಂದು ನಂಬಲಾಗಿದೆ.ಬಂದ ಭಕ್ತಾದಿಗಳಿಗೆ ನೆರಳು ನೀಡಿ ಅಲ್ಲಿ

ಉಳಿದುಕೊಳ್ಳಲು ಆಶ್ರಯ ನೀಡುತ್ತಿದೆ. ಸುತ್ತಲಿನ ಹಳ್ಳಿ, ನಗರ, ಪಟ್ಟಣಗಳಿಂದ ಈ ವಲೀಯವರ ಉರುಸ್‌ಗೆ ಬರುತ್ತಾರೆ.ಕನಕಪುರದ ಎಲ್ಲಾ ದರ್ಗಾಗಳಂತೆಯೇ ಈ ದರ್ಗಾದಲ್ಲಿಯು ಉರುಸ್ ಆಚರಣೆ ನಡೆಯುತ್ತದೆ.ಸುಮಾರು ಎರಡು ಸಾವಿರ ಭಕ್ತಾದಿಗಳು ಸೇರುತ್ತಾರೆ ಎಂದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಅಲ್ಲಿನ ಮುರ್ಷದ್ ತಿಳಿಸುತ್ತಾರೆ.ಈ ವಲೀಯವರ ಮೇಲೆ ಭಕ್ತಾದಿಗಳು ಇಟ್ಟಿರುವ ನಂಬಿಕೆಗಳಲ್ಲಿ ಒಂದು ನಂಬಿಕೆಯನ್ನು ಮೈಸೂರಿನಿಂದ ಬಂದ ರಿಯಾಜ್‌ರವರು ಹೀಗೆ ಹೇಳುತ್ತಾರೆ."ವಲೀ" ರವರ ಪವಾಡಗಳ ಬಗ್ಗೆ ತಿಳಿಯುವಂತಹ ವ್ಯಕ್ತಿ ಇನ್ನು ಹುಟ್ಟಿಲ್ಲ. ಅವರ ಬಗ್ಗೆ ತಿಳಿದುಕೊಳ್ಳುವಂತಹ ಧೈರ್ಯ ಯಾರಿಗೂ ಇಲ್ಲ. ನೀವು ಅವರ ದರ್ಬಾರ್ ಬಗ್ಗೆ ತಿಳಿಸಿ ಎಂದು ಕೇಳುತ್ತಿದ್ದಿರಲ್ಲ ಹಾಗೆ ಕೇಳಬಾರದು.ಅವರು "ಅಲ್ಲಾವಲೀ" ಅವರಿಗೆ ಸಾವು ಎನ್ನುವುದಿಲ್ಲ. ಅವರು ಯಾವಾಗಲೂ ಜೀವಂತವಾಗಿ ನಮ್ಮ ಜೊತೆಯಲ್ಲಿಯೇ ಇರುತ್ತಾರೆ.ಅವರನ್ನು ನೆನೆಯುತ್ತಾ ನಾವು ಮುಂದೆ ಓಡಿದರೆ ಅವರು ಕರಿಯ ಕಂಬಳಿಯನ್ನು ಹಾಕಿಕೊಂಡು ಹಿಂದೆ ಬರುತ್ತಾರೆ.ಯಾವ ಕೆಲಸ ನೆರವೇರುತ್ತದೆ, ಯಾವ ಕೆಲಸ ನೆರವೇರುವುದಿಲ್ಲ ಎಂದು ಕನಸಿನಲ್ಲಿ ಬಂದು ಹೇಳಿ ಹೋಗುತ್ತಾರೆ.ಇಂತಹ ಮಹಾನ್ ಅಲ್ಲಾವಲೀಯವರ ಬಗ್ಗೆ ಕೇಳಬಾರದು.ಎಂದು ಗದರುವ ರೀತಿಯಲ್ಲಿ ಬಹಳ ಬಾಹುಕರಾಗಿ ಹೇಳುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನಡೆದ ಘಟನೆಯಾಗಿದೆ.ಹೀಗೆ ಅನೇಕ ರೀತಿಯ ನಂಬಿಕೆಗಳು ಜನಪದರಲ್ಲಿ ಇರುವುದರಿಂದ ಬೆಂಗಳೂರಿನಿಂದ ಒಬ್ಬ ಮುರ್ಷದ್ ರವರು ಬಂದು ಅಲ್ಲಿ ದರ್ಗಾದಲ್ಲಿ ನೆಲೆ ನಿಂತು ಬಂದ ಭಕ್ತಾದಿಗಳಿಗೆ ಫಾತೇಹ ಓದಿಸಿ ಕಳುಹಿಸುತ್ತಾರೆ.

### ಕೆರಳಾಳುಸಂದ್ರ

#### ಶೇಖ್ ಅಬ್ದುಲ್ ಷಾ ಖಾದ್ರಿ

ಶೇಖ್ ಅಬ್ದುಲ್ ಷಾ ಖಾದ್ರಿಯವರು ಐಕ್ಯರಾಗಿರುವ ಸ್ಥಳವು ಕನಕಪುರದಿಂದ ಮಳಗಾಳು ಮಾರ್ಗವಾಗಿ ಚೀರಣಕುಪ್ಪೆಯನ್ನು ದಾಟಿದ ಮೇಲೆ ಸಿಗುವ ಊರೇ ಕೆರಳಾಳುಸಂದ್ರ. ಈ ಕೆರಳಾಳುಸಂದ್ರ ಕನಕಪುರದಿಂದ 6 ಕಿ.ಮೀ ದೂರದಲ್ಲಿದೆ. ಕನಕಪುರದಿಂದ ಕೆರಳಾಳುಸಂದ್ರಕ್ಕೆ ಪ್ರವೇಶದ ಹೆಬ್ಬಾಗಿಲಿನಲ್ಲಿ ಬಸವೇಶ್ವರ ದೇವಾಲಯದ ಬಲಭಾಗಕ್ಕೆ ತಿರುಗಿ ಒಂದು ಕಿ.ಮೀ ಸಾಗಿದರೆ ಕಲ್‌ಕುಟ್‌ಹರೆಯ ತಮ್ಮದೇ ಜಮೀನಿನಲ್ಲಿ 80 ವರ್ಷಗಳ ಹಿಂದೆ ಇವರು ಐಕ್ಯರಾಗಿರುವ ಸ್ಥಳದಲ್ಲಿ ಯಾವುದೇ ರೀತಿಯ ಮಜಾರ್ ಇರಲಿಲ್ಲ. ಒಂದು ಸಲ ಈ ವಲೀರವರು ತಮ್ಮ ಹಿರಿಯ ಮಗಳ ಕನಸಿನಲ್ಲಿ ಬಂದು ನನ್ನ ಸಮಾಧಿಗೆ ಮಜಾರ್ ಕಟ್ಟಿಸಿ ಎಂದು ಹೇಳಿದ್ದರಂತೆ, ಅದರಂತೆ ಅವರು ತನ್ನ ತಂದೆಯವರ ಸಮಾಧಿಗೆ ಮಜಾರ್ ಕಟ್ಟಿಸಿ ಪ್ರತಿ ಶುಕ್ರವಾರ ಬಂದು ಫಾತೇಹ ಓದಿ ಗಂಧದ ಕಡ್ಡಿ ಮತ್ತು ಹೂಗಳನ್ನು ತಂದು ಮಜಾರ್‌ನನ್ನು

ಅಲಂಕರಿಸಿ ಹೋಗುತ್ತಿದ್ದರಂತೆ ತದ ನಂತರ ಇತ್ತೀಚಿಗೆ ಆರು ವರ್ಷಗಳ ಹಿಂದೆ ವಲೀಯವರ ಹಿರಿಯ ಮಗನಾದ ಶೇಖ್ ಇಸಾಕ್ ರವರ ಮಗ ಮುನೀರ್‌ಪಾಷರವರ ಕನಸಿನಲ್ಲಿ ಬಂದು ದರ್ಗ ಕಟ್ಟಿಸುವ ಹಾಗೆ ಸೂಚಿಸಿದರಂತೆ ಇದನ್ನ ಅರಿತ ಅವರು ಸಮಾಧಿಯ ಮೇಲೆ ಒಂದು ಸೂರು ನಿರ್ಮಿಸಿ ದರ್ಗಾವಾಗಿ ಮಾರ್ಪಟ್ಟಿತಂತೆ, ಮೊದಲನೇ ವಾರದಲ್ಲಿ ಈ ಉರುಸ್ ನಡೆಯುತ್ತದೆ. ಕನಕಪುರದ ತಾಲ್ಲೂಕಿನ ದರ್ಗಾಗಳಂತೆಯೇ ಎಲ್ಲಾ ರೀತಿಯ ಆಚರಣೆಗಳು ನಡೆಯುತ್ತದೆ.ಆದ್ರೆ ಊರಿನಲ್ಲಿ ಮೆರವಣಿಗೆ ನಡೆಯುವುದಿಲ್ಲ. ದರ್ಗಾದ ಹತ್ತಿರವೇ ಗಂಧ ಹೂವಿನ ಚಾದರ್‌ನಿಂದ ಶೃಂಗರಿಸಿ ವಲೀಯವರನ್ನು ನೆನೆಯುತ್ತಾ ಮುರ್ಷದ್ ರವರ ಮೂಲಕ ಗಂಧ ಏರಿಸಲಾಗುತ್ತದೆ. ಹೀಗೆ ನಡೆಯುವ ದರ್ಗಾದ ಉರುಸ್‌ನಲ್ಲಿ ತೋಕಸಂದ್ರ, ಕನಕಪುರ, ಆಡನಕುಪ್ಪೆ, ನಾರಾಯಣಪುರ, ಮರಳೇಬೇಕುಪ್ಪೆ, ಟಿ.ಬೇಕುಪ್ಪೆ, ಬೆಂಗಳೂರು, ಸಂಗಮ, ಸಾತನೂರು ಹಾಗೂ ಸುತ್ತ–ಮುತ್ತಲಿನ ಸುಮಾರು 500 ರಿಂದ 600 ಭಕ್ತಾದಿಗಳು ಸೇರುತ್ತಾರೆ.ಈ ಊರಿನಲ್ಲಿ ಮುಸ್ಲಿಂ ಸಮುದಾಯದ ಆರು ಮನೆಗಳಿವೆ. ಅನ್ಯ ಸಮುದಾಯದ 300 ಮನೆಗಳಿವೆ. ಒಟ್ಟಾರೆಯಾಗಿ 2,000 ಜನಸಂಖ್ಯೆಯನ್ನು ಹೊಂದಿರುವ ಊರಾಗಿದೆ.ಆ ಊರಿನ ಅನ್ಯ ಧರ್ಮೀಯರು ಕೂಡ ದರ್ಗಾಕ್ಕೆ ಭೇಟಿ ಕೊಟ್ಟು, ಫಾತೇಹ ಓದಿಸಿ ಆ ದಿನ ದರ್ಗಾದಲ್ಲಿ ಆಯೋಜಿಸಿರುವಂತಹ ಊಟದ ವ್ಯವಸ್ಥೆದಯನ್ನು ಪ್ರಸಾದವೆಂದು ಸ್ವೀಕರಿಸಿ, ಈ ದರ್ಗಾಕ್ಕೆ ತಮ್ಮಲ್ಲಿರುವ ಸಹಾಯವನ್ನು ಮಾಡುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಸಾಂಸ್ಕೃತಿಕ ನಾಯಕರುಗಳ 24 ದರ್ಗಾಗಳಿದ್ದು, ಆ ದರ್ಗಾಗಳಲ್ಲಿ ಸಾಂಸ್ಕೃತಿಕ ಮತ್ತು ಸತ್ಯವಂತ ಬಿಂಬಿಸಲ್ಪಡುವ ಪವಾಡ ಪುರುಷರು ಮತ್ತು ಸತ್ಯವಂತ ಫಕೀರರ ಸಮಾಧಿಗಳ ಉತ್ತರ–ದಕ್ಷಿಣ ಮುಖವಾಗಿ ನಿರ್ಮಾಣಗೊಂಡಿರುತ್ತವೆ. ಸಹಜವೆಂಬಂತೆ ಎಲ್ಲಾ ದರ್ಗಾಗಳ ವಲೀಯವರ ಸಮಾಧಿಯ ಮೇಲೆ ಹೂವಿನ ಮತ್ತು ಹಸಿರು ಬಣ್ಣದ ಚಾದರ್ ಹೊದಿಸಲಾಗಿರುತ್ತದೆ. ಸಮಾಧಿಯ ಉತ್ತರಕ್ಕೆ ಮುಸಲ್ಲಾ ಮೂರರಿಂದ ನಾಲ್ಕು ಅಡಿಗಳಷ್ಟು ಉದ್ದವಿರುತ್ತದೆ. ಮುಸಲ್ಲಾದ ಪಕ್ಕದಲ್ಲಿ ಗಂಧದ ಕಡ್ಡಿ ಮತ್ತು ಸಾಂಬ್ರಾಣಿ ಹಾಕುವಂತಹ ಉದ್‌ದಾನ್ ಇಟ್ಟಿರುತ್ತಾರೆ. ಹೋದಂತಹ ಭಕ್ತಾದಿಗಳು ಸಾಂಬ್ರಾಣಿ ಹಾಗೂ ಗಂಧದ ಕಡ್ಡಿ ಹಚ್ಚಿ ಸಮಾಧಿಯ ಸುತ್ತ ಮೂರು ಪ್ರದಕ್ಷಿಣೆ ಮಾಡಿ ಅಲ್ಲಿಯೇ ಗರ್ಭ ಗುಡಿಯಲ್ಲಿ ಕುಳಿತು ಯಾಸೀನ್ ಓದುತ್ತಾರೆ.

ಇನ್ನು ಕೆಲವು ದರ್ಗಾಗಳಲ್ಲಿ ಗರ್ಭಗುಡಿ ಮತ್ತು ಗರ್ಭಗುಡಿಯ ಹೊರಗಡೆ ಇರುವ ಸಭಾಂಗಣದಲ್ಲಿ ಮೂರು ಸಲ ಪ್ರದಕ್ಷಿಣೆ ಮಾಡುತ್ತಾರೆ.ದರ್ಗಾಕ್ಕೆ ಭೇಟಿ ಕೊಡುವ ಬಹುತೇಕ ಭಕ್ತಾದಿಗಳು ಸುಗಂಧದ್ರವ್ಯಗಳನ್ನು (ಸೆಂಟ್) ಸಮಾಧಿಯ ಸುತ್ತ ಸಿಂಪಡಿಸುತ್ತಾರೆ. ಜೊತೆಗೆ ನಿಂಬೆಹಣ್ಣು ಮತ್ತು ನೀರನ್ನಿಟ್ಟು ಮುರ್ಷದ್ ರವರ ಮೂಲಕ ವಲೀಯವರ ಹೆಸರಿನ ಮೇಲೆ

ಓದಿ ನೀರು ಮತ್ತು ನಿಂಬೆಹಣ್ಣನ್ನು ಭಕ್ತಾದಿಗಳಿಗೆ ಹಿಂದಿರುಗಿಸುತ್ತಾರೆ. ಭಕ್ತಾದಿಗಳಿ ನಿಂಬೆಹಣ್ಣನ್ನು ತಮ್ಮ ಮನೆಗಳ ಬಾಗಿಲಿಗೆ ಹಾಕುತ್ತಾರೆ.ನೀರನ್ನು ಮನೆಯ ಗೋಡೆಗಳಿಗೆ ಎರಚುತ್ತಾರೆ.ಮನೆ ಮತ್ತು ಅಕ್ಕ-ಪಕ್ಕದವರಿಗೆ ರೋಗಗಳಿದ್ದರೆ ಇದನ್ನು ತೀರ್ಥ ಎಂದು ಸ್ವೀಕರಿಸುತ್ತಾರೆ.ಕನಕಪುರ ತಾಲ್ಲೂಕಿನ ಪ್ರತಿಯೊಂದು ದರ್ಗಾದಲ್ಲಿಯು ಈ ದೃಶ್ಯಾವಳಿಗಳು ಕಂಡು ಬರುತ್ತವೆ.

ಕನಕಪುರ ತಾಲ್ಲೂಕಿನ ದರ್ಗಾಗಳ ವಿನ್ಯಾಸವು ಮೊಘಲರ ಕಲೆ ಮತ್ತು ವಾಸ್ತುಶಿಲ್ಪವನ್ನು ಹೋಲುತ್ತವೆ. ಬಹುತೇಕ ದರ್ಗಾಗಳು ಸುಸರ್ಜಿತವಾದ ಕಟ್ಟಡಗಳಿಂದ ನಿರ್ಮಾಣಗೊಂಡು ನಾಲ್ಕು ಮೂಲೆಗಳಲ್ಲಿ ಚಿಕ್ಕದಾದ ಮಿನಾರ್‌ಗಳು ಕಂಡುಬರುತ್ತದೆ. ಹಾಗೂ ವಲೀಯವರ ಸಮಾಧಿಯ ಮಧ್ಯದಲ್ಲಿ ಒಂದು ದೊಡ್ಡದಾದ ಗುಂಬಜ್ ಮೇಲೆ ಕಟ್ಟಿರುತ್ತಾರೆ. ಆ ಗುಂಬಜ್‌ನಿನ ಕೆಳಭಾಗದಲ್ಲಿ ಮಿನುಗುವ ದೀಪಗಳು ಮತ್ತು ಹೊಳೆಯುವಂತಹ ಪ್ಲಾಸ್ಟಿಕ್‌ನಿಂದ ತಯಾರಿಸಲ್ಪಟ್ಟಿರುವ ಬಣ್ಣ ಬಣ್ಣದ ತೋರಣಗಳು ಕಟ್ಟಿರುತ್ತಾರೆ.ಸಭಾಂಗಣದ ಗೋಡೆಗಳ ಮೇಲೆ ಕುರಾನಿನ ಆಯತ್‌ಗಳನ್ನು ಅರಬ್ಬೀ ಮತ್ತು ಉರ್ದು ಭಾಷೆಯಲ್ಲಿ ಬರೆದಿರುತ್ತಾರೆ.ಪ್ರತಿ ದರ್ಗಾದ ಪಕ್ಕದಲ್ಲಿ ಮಹಬೂಬ್ ಸುಭಾನಿ ಅಥವಾ ಗೌಸ್‌ಯೇ ಪಾಕ್ ಧ್ವಜಸ್ತಂಭಗಳನ್ನು ನಿಲ್ಲಿಸಿ, ಆ ಸ್ತಂಭ ಬಹುತೇಕವಾಗಿ ಹಸಿರು ಬಾವುಟವನ್ನು ಹಾರಿಸಲಾಗುತ್ತದೆ.

ಇನ್ನು ಕೆಲವು ದರ್ಗಾಗಳಲ್ಲಿ ಕೇಸರಿ ಮತ್ತು ಹಸಿರು ಬಾವುಟಗಳನ್ನು ಹಾರಿಸಲಾಗಿರುತ್ತದೆ.ಉಳಿದಂತೆ ಸ್ತಂಭದ ಕಂಬಕ್ಕೆ ಹಸಿರು, ಕೇಸರಿ, ಹಳದಿ, ಬಿಳಿ ಧ್ವಜಗಳನ್ನು ಕಟ್ಟಿರುತ್ತಾರೆ.ಆಸ್ತಂಭದ ಕೆಳಭಾಗದಲ್ಲಿ ಯಾವಾಗಲೂ ಉರಿಯುವ ಹಾಗೆ ದ್ವೀಪದ ಕೋಣೆಯನ್ನು ಮಾಡಲಾಗಿರುತ್ತದೆ.ಇದೇ ರೀತಿ ದರ್ಗಾದ ವಲೀಯವರಸಮಾಧಿಯ ತಲೆಯ ಭಾಗದ ಕಡೆ ಯಾವಾಗಲೂ ದೀಪ ಉರಿಯುತ್ತಿರುತ್ತದೆ.ಆ ದೀಪದ ಮುಖಾಂತರ ವಲೀಯವರ ಜೀವಂತಿಕೆಯನ್ನು ದೀಪದಲ್ಲಿ ಕಾಣಲಾಗುತ್ತದೆ.ಕನಕಪುರದ ದರ್ಗಾಗಳು ಬಹುತೇಕವಾಗಿ ಹಸಿರು ಬಣ್ಣ ಮತ್ತು ಬಿಳಿ ಬಣ್ಣದಿಂದ ಕಂಗೊಳಿಸುತ್ತಿರುತ್ತದೆ.ಪ್ರತಿಯೊಂದು ದರ್ಗಾದ ಹೊರ ಭಾಗದಲ್ಲಿಯು ನೀರಿನ ವ್ಯವಸ್ಥೆ ಮಾಡಲಾಗಿರುತ್ತದೆ. ಬಂದಂತಹ ಭಕ್ತಾದಿಗಳು ಆ ನೀರಿನಿಂದ ವಜ್ಹೂ ಮಾಡಿ ಅಥವಾ ಅನ್ಯ ಧರ್ಮೀಯರು ಬಂದರೆ ಅವರೂ ಕೂಡ ಕೈ ಕಾಲು ಮುಖವನ್ನು ತೊಳೆದು ದರ್ಗಾದ ಒಳಗೆ ಪ್ರವೇಶ ಮಾಡಬೇಕು.

ಕೆಲವು ದರ್ಗಾಗಳಲ್ಲಿ ನವದಾಂಪತ್ಯ ಜೀವನಕ್ಕೆ ಕಾಲಿಡುವ ಹೆಣ್ಣು ಗಂಡಿಗೆ ಮದುವೆ ಮೂರು-ನಾಲ್ಕು ದಿನ ಮುಂಚಿತವಾಗಿ ದರ್ಗಾಕ್ಕೆ ಕರೆದುಕೊಂಡು ಹೋಗಿ "ನಹಾವನ್" ಹಾಕಿಸುತ್ತಾರೆ.ಈ "ನಹಾವನ್" ವನ್ನು ದರ್ಗಾದ ಮುರ್ಷದ್‌ರವರು ನಿಂಬೆಹಣ್ಣುಗಳನ್ನು ಮಂತ್ರಿಸುತ್ತಾ ತಲೆ ಭುಜಗ್ಳ ಮೇಲೆ ಎರಡೆರಡು ನಿಂಬೆಹಣ್ಣುಗಳನ್ನು ಕೂಯ್ದು ನಿವಾಳಿಸಿ ನೀರಿನಲ್ಲಿ

ಹಾಕುತ್ತಾರೆ. ಹಾಗೂ ವರ ಅಥವಾ ವಧುವನ್ನು ನಿಲ್ಲಿಸಿ ತಲೆಯಿಂದ ಕಾಲಿನವರೆಗೆ ನಿಂಬೆಹಣ್ಣುಗಳನ್ನು ಮೂರು ಸಲ ನಿವಾಳಿಸಿ ಪಾದದ ಹತ್ತಿರ ಕೊಯ್ಯುತ್ತಾರೆ. ಈ ನಿಂಬೆಹಣ್ಣಿನ ರಸವನ್ನು ನೀರಿನಲ್ಲಿ ಹಿಂಡಿ ಸ್ನಾನ ಮಾಡಬೇಕು. ಹಾಗೂ ಬೇರೆ ಬಟ್ಟೆಯನ್ನು ಧರಿಸಬಬೇಕು. ನಹಾವನ್ ಸಂದರ್ಭದಲ್ಲಿ ಹಾಕಿಕೊಂಡ ಬಟ್ಟೆಯನ್ನು ಅಲ್ಲಿಯೇ ಸುಡುತ್ತಾರೆ.ಹೀಗೆ ಹುಟ್ಟಿನಿಂದ ಸಾಯುವವರೆಗೂ ಒಂದಲ್ಲ ಒಂದು ರೀತಿಯ ಆಚರಣೆಗಳನ್ನು ಆಚರಿಸುವ ಸಂಸ್ಕೃತಿಯನ್ನು ಕನಕಪುರ ತಾಲ್ಲೂಕಿನ ದರ್ಗಾಗಳಲ್ಲಿ ಕಂಡು ಬರುತ್ತವೆ.

# ಅಧ್ಯಾಯ–4

## ಭಾವೈಕ್ಯತೆಯ ತಾಣಗಳಾಗಿ ದರ್ಗಾಗಳು

ಇಡೀ ಪ್ರಪಂಚವೇ ಒಂದಲ್ಲಾ ಒಂದು ರೀತಿಯಲ್ಲಿ ಕೋಮುವಾದದಲ್ಲಿ ತೊಡಗಿರುವಾಗ ಭಾವೈಕ್ಯತೆಯ ತೊಟ್ಟಿಲುಗಳಾಗಿರುವಂತಹ ಕೆಲವೊಂದು ಸಾಂಸ್ಕೃತಿಕ ಆಚರಣೆಗಳು ಏಕತೆಗೆ ಭಾಜನವಾಗುವ ತಾಣಗಳಾಗಿ ದರ್ಗಾಗಳು ಕಂಡುಬರುತ್ತದೆ. ಇಂತಹ ದರ್ಗಾಗಳು ಭಾರತ ದೇಶದಲ್ಲಿ ವಿವಿಧತೆಯಲ್ಲಿ ಏಕತೆಯನ್ನು ಸಾರುತ್ತಿರುವ ತಾಣಗಳಾಗಿವೆ. ಇಂತಹ ತಾಣಗಳು ಭಾರತಾದ್ಯಂತ ಕಂಡುಬರುತ್ತವೆ. ಹಾಗೆಯೇ ಕರ್ನಾಟಕದ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ದರ್ಗಾಗಳು ಭಾವೈಕ್ಯತೆಯ ಭಾಜನವಾಗಿವೆ. ಕನಕಪುರ ತಾಲ್ಲೂಕಿನಲ್ಲಿ 24 ದರ್ಗಾಗಳಿದ್ದು,, ಕನಕಪುರ ನಗರಸಭೆಯಲ್ಲಿ 5 ದರ್ಗಾಗಳು ಹಾಗೂ ಗ್ರಾಮೀಣ ಪ್ರದೇಶದಲ್ಲಿ 19 ದರ್ಗಾಗಳು ಕಂಡುಬರುತ್ತವೆ. ಕನಕಪುರದ ದರ್ಗಾಗಳಲ್ಲಿ ಮುಸ್ಲಿಮರಲ್ಲದ ಅನ್ಯ ಧರ್ಮೀಯರರು ಬೆರಳೆಣಿಕೆಯಷ್ಟು ಭಾಗವಹಿಸಿದ್ದರೂ ಇನ್ನುಳಿದ 19 ದರ್ಗಾಗಳಲ್ಲಿ ಮುಸ್ಲಿಂ ಮತ್ತು ಅನ್ಯ ಧರ್ಮೀಯರು ಯಥೇಚ್ಚವಾಗಿ ಕಾಣುವುದು ಕಂಡುಬರುತ್ತಾರೆ. ಇಂತಹ ತಾಣಗಳಾದ ದರ್ಗಾಗಳು ಕೋಮುವಾದವನ್ನು ದೂರ ಮಾಡುತ್ತಾ, ಸ್ನೇಹ ಬಾಂಧವ್ಯವನ್ನು ವೃದ್ಧಿಸುವ ಸಾಂಸ್ಕೃತಿಕ ವೇದಿಕೆಗಳಾಗಿವೆ. ದರ್ಗಾಗಳಲ್ಲಿ ನಡೆಯುವಂತಹ ಬಾಬಯ್ಯನ ಕೊಂಡ ಸ್ನೇಹ ಸೇತುವೆಯ ಸಾಂಸ್ಕೃತಿಕ ವೈಭವಗಳನ್ನು ತಳಿಸುಕೊಡುವಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತವೆ. ಕನಕಪುರ ತಾಲ್ಲೂಕಿನ ಹಿಂದೂ ಧರ್ಮೀಯರು ಆಚರಿಸುವಂತಹ ಊರ ಹಬ್ಬದ ಪ್ರಯುಕ್ತ ಬಸವೇಶ್ವರ ಕೊಂಡ, ಮಾರಮ್ಮನ ಕೊಂಡ, ಕಬ್ಬಾಳಮ್ಮನ ಕೊಂಡ, ಊರ ಮಾರಮ್ಮನ ಕೊಂಡ, ಕರಗ ಮಹೋತ್ಸವಗಳನ್ನು ಹೋಲಿಕೆ ಮಾಡಿ ನೋಡಿದಾಗ ದರ್ಗಾಗಳಲ್ಲಿ ನಡೆಯುವಂತಹ ಬಾಬಯ್ಯನಕೊಂಡ ಮತ್ತು ಈ ಕೊಂಡಗಳಿಗೆ ಅವಿನಾಭಾವ ಸಂಬಂಧವಿದೆಯೇ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ದರ್ಗಾಗಳಲ್ಲಿ ನಡೆಯುವ ಉರುಸ್ ಆಚರಣೆಯ ರೀತಿಯ ಕರಗ ಉತ್ಸವ ಒಂದೇ ಆಗಿ ಕಾಣಿಸುವುದು ಅನ್ಯ ಧರ್ಮೀಯರ ಸಾಂಸ್ಕೃತಿಕ ನೆಲೆಗಟ್ಟನ್ನು ಕಟ್ಟಿಕೊಡುತ್ತದೆ.

ಕನಕಪುರದ ತಾಲ್ಲೂಕಿನ ದರ್ಗಾಗಳಿಗೆ ಲಿಂಗಾಯಿತರು, ಒಕ್ಕಲಿಗರು, ತಿಗಳರು, ಅರಸರು, ಬ್ರಾಹ್ಮಣರು, ಗೌಡರು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ವಡ್ಡರು, ಹಕ್ಕಿಪಿಕ್ಕಿಯವರು ಹೀಗೆ ಅನೇಕ ಸಮುದಾಯಗಳು ಯಾವುದೇ ಭೇದವಿಲ್ಲದೆ ದರ್ಗಾಗಳಿಗೆ ಭೇಟಿಕೊಟ್ಟು, ವಲೀಯವರ ಹೆಸರಿನಲ್ಲಿ ಫಾತೇಹ ಓದಿಸಿ ಹರಕೆಗಳನ್ನು ಕಟ್ಟಿಕೊಳ್ಳುವುದು, ತಾಲ್ಲೂಕಿನಾದ್ಯಂತ ದರ್ಗಾಗಳಲ್ಲಿ ಕಂಡುಬರುತ್ತದೆ.

ದರ್ಗಾಗಳ ಉರುಸ್‌ನ ಮೆರವಣಿಗೆರಯಲ್ಲಿ ಅನ್ಯ ಧರ್ಮೀಯರು ಸಕ್ರಿಯವಾಗಿ ಪಾಲ್ಗೊಂಡು, ಸ್ನೇಹ, ಪ್ರೀತಿ, ವಿಶ್ವಾಸ, ನಂಬಿಕೆಗಳಿಂದ ಒಂದಾಗಿ ಊರ ಹಬ್ಬದ ರೀತಿಯಲ್ಲಿ ವಲೀಗಳ ಉತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ಇದಕ್ಕೆ ಒಂದು ಉದಾಹರಣೆ ಎಂದರೆ ಹಜರತ್ ಖರೀಬುಲ್ಲಾ ಷಾ ಖಾದ್ರಿಯವರ ದರ್ಗಾದ ಉರುಸ್ ಸಂದರ್ಭದಲ್ಲಿ ಗಂಧವನ್ನು ಹತ್ತಿಸಿ, ಫಾತೇಹವನ್ನು ಓದಿಸಿದ ನಂತರ ಗೋಧಿ, ಬೆಲ್ಲ, ತುಪ್ಪ, ಕಾಯಿಗಳನ್ನು ಸೇರಿಸಿ ಮಾಡುವಂತಹ ಮಲೀದಾವನ್ನು ಅನ್ಯ ಧರ್ಮೀಯರು "ಮಾಲಾದುಡಿ" ಎಂದು ವಲೀಯವರ ಪ್ರಸಾದ ಸ್ವೀಕರಿಸುತ್ತಾರೆ. ಇಂತಹ ಪ್ರಸಾದದ ಸಂಸ್ಕೃತಿಕ ಹಿಂದೂ ಧರ್ಮದಲ್ಲಿ ಕಾಣಬಹುದಾದ ಸಂಸ್ಕೃತಿಯಾಗಿದೆ.

ಸೂಫಿ ಸಂತರು ಐಕ್ಯರಾಗಿರುವಂತಹ ಸ್ಥಳಗಳು ಮತ್ತು ಹಿಂದೂ ಧರ್ಮದ ಮಠಗಳ ಸಂಬಂಧಗಳನ್ನು ದರ್ಗಾಗಳು ವ್ಯಕ್ತಪಡಿಸುತ್ತವೆ. ಮಠಗಳಲ್ಲಿ ಎಲ್ಲಾ ಸಮುದಾಯದವರಿಗೂ ಊಟೋಪಚಾರಗಳೊಂದಿಗೆ ವಸತಿಯನ್ನು ಸಹ ಒದಗಿಸಿಕೊಡುವ ಮೂಲಕ ಸಮಾಜ ಸೇವೆಯಲ್ಲಿ ತೊಡಗಿರುವ ಮಠಗಳು ಮತ್ತು ಮಠಗಳ ಸ್ವಾಮೀಜಿಗಳಂತೆ ದರ್ಗಾಗಳು ಕೂಡ ಎಲ್ಲಾ ಸಮುದಾಯದವರಿಗೆ ಆಕರ್ಷಿಸುವ ಹಾಗೂ ಅವರಿಗೆ ನೆಮ್ಮದಿ ಒದಗಿಸುವ ತಾಣಗಳಾಗಿವೆ. ಮಠಗಳು ವಿದ್ಯಾಭ್ಯಾಸದ ಜೊತೆಗೆ ಹಿಂದೂ ಧಾರ್ಮಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರೂ ಕೂಡ ಎಲ್ಲಾ ಧರ್ಮವನ್ನು ಗೌರವಿಸುವ ಮಠಗಳಾಗಿವೆ. ಅದೇ ರೀತಿ ದರ್ಗಾಗಳು ಕೂಡ ಎಲ್ಲಾ ಧರ್ಮೀಯರನ್ನು ತನ್ನಡೆಗೆ ಸೆಳೆಯುವ ಮೂಲಕ ಸಾಂಸ್ಕೃತಿಕ ನಾಯಕರಾಗಿದ್ದಾರೆ. ಇಂತಹ ಸಾಂಸ್ಕೃತಿಕ ನಾಯಕರನ್ನು ಅನ್ಯ ಧರ್ಮದಲ್ಲಿ ಗುರುತಿಸುವುದಾದರೆ ಮಂಟೇಸ್ವಾಮಿ, ಜುಂಜಪ್ಪ, ಸಿದ್ದಾಪ್ಪಾಜಿ, ಮಹದೇಶ್ವರರಂತಹ ಸಾಂಸ್ಕೃತಿಕ ನಾಯಕರ ಸಾಲಿಗೆ ಈ ದರ್ಗಾಗಳಲ್ಲಿ ಇರುವಂತಹ ಕೆಲವು ವಲೀಗಳು ಆ ಸ್ಥಾನವನ್ನು ಅಲಂಕರಿಸಿ ಸಮುದಾಯಗಳನ್ನು ತನ್ನೆಡೆಗೆ ಸೆಳೆಯುವ ಮಹಾನ್ ಪುರುಷರಾಗಿದ್ದಾರೆ. ಹೀಗೆ ಮಂಟೇಸ್ವಾಮಿ ಕಾವ್ಯವಾಗಿರಬಹುದು, ಜುಂಜಪ್ಪನ ಬುಡಕಟ್ಟು ಮಹಾಕಾವ್ಯವಾಗಿರಬಹುದು, ಮಹದೇಶ್ವರನ ಮಹಾ ಕಾವ್ಯಗಳಾಗಿರಬಹುದು ಅಂತಹ ಕಾವ್ಯಗಳನ್ನು ರಚಿಸಬಹುದಾಂತಹ ಸಾಂಸ್ಕೃತಿಕ ನಾಯಕರು ಕನಕಪುರ ತಾಲ್ಲೂಕಿನಲ್ಲಿದ್ದಾರೆ.ಪ್ರಮುಖವಾಗಿ ವಲೀಗಳು ಬದುಕಿದ್ದಾಗ ಇವರುಗಳನ್ನು ಫಕೀರರೆಂದು ಕರೆಯುತ್ತಾರೆ. ಫಕೀರರು ಮಠಗಳಲ್ಲಿ, ಸ್ವಾಮೀಜಿಗಳಿ ತಮ್ಮ ಶಿಷ್ಯರಿಗೆ ದೀಕ್ಷೆ ಕೊಡುವ ಮುಖಾಂತರ ಸಮಾಜ ಸೇವೆಗೆ ಅವರನ್ನು ಮುಕ್ತಿಗೊಳಿಸುವ ಹಾಗೆ ಮುಸ್ಲಿಂ ಸಮುದಾಯದಲ್ಲಿ ಫಕೀರರು ತಮ್ಮ ಗುರುಗಳಿಂದ ದೀಕ್ಷೆ (ಬಯ್ಯತ್) ಪಡೆದು ಸಮಾಜಮುಖಿ

ಚಿಂತನೆಗಳಿಂದ ಎಲ್ಲರ ಒಳಿತುಗಳನ್ನು ಬಯಸುವ ತಮ್ಮ ಗುರುಗಳ ಹೆಸರಿನ ಮೂಲಕ ತಮ್ಮ ಹೆಸರುಗಳನ್ನು ಗುರುತಿಸಿಕೊಳ್ಳುತ್ತಾರೆ.

ಇಂತಹ ಗುರುತಿಸುವಿಕೆಯಿಂದಲೇ ದರ್ಗಾಗಳ ವಲೀಗಳ ಹೆಸರು ಹಜರತ್ ಸಯ್ಯದ್ ಖಾದರ್ ವಲೀ ಷಾ ಖಾದ್ರಿ ಹಜರತ್ ಸಯ್ಯದ್ ಮಹಬತುಲ್ಲಾ ಷಾ ಖಾದ್ರಿಗಳೆಂಬ ಹೆಸರುಗಳಿಂದ ಕರೆಸಲ್ಪಟ್ಟಿರುವುದು ಕಂಡು ಬರುತ್ತದೆ.ದರ್ಗಾಗಳಲ್ಲಿ ಕಂಡುಬರುವಂತಹ ಗಂಧದ ಕಡ್ಡಿ ಸಾಂಬ್ರಾಣಿ, ಬೂಂದಿ, ಸಕ್ಕರೆ, ಬೆಲ್ಲ, ಹುರಿಗಡಲೆ, ಸಿಹಿಅನ್ನ, ಮಲೀದಾಗಳ ಮೂಲಕ ಫಾತೇಹ ಓದಿಸುತ್ತಾರೆ.ಈ ಸಂಸ್ಕೃತಿಯನ್ನು ಮುಸ್ಲಿಂ ಸಮುದಾಯದ ಕೆಲವು ಮೌಲ್ವಿಗಳು ವಿರೋಧಿಸುತ್ತಾರೆ. ಅವರ ವಿರೋಧಕ್ಕೆ ಪ್ರಮುಖ ಕಾರಣವೆಂದರೆ ಮುಸ್ಲಿಂಯೇತರು ಆಚರಿಸುವ ಪೂಜೆ ಪುರಸ್ಕಾರಗಳಾಗಿರುವುದರಿಂದ ಇಸ್ಲಾಂ ಧರ್ಮದಲ್ಲಿ ಈ ಆಚರಣೆಗಳು ನಿಷೇಧಿತವಾದದ್ದು ಎಂಬ ಅಭಿಪ್ರಾಯಗಳಿದ್ದರೂ ಮುಸ್ಲಿಂ ಜನಪದ ಸಂಸ್ಕೃತಿಯಲ್ಲಿ ಹಿಂದು ಜನಪದ ಸಂಸ್ಕೃತಿಯನ್ನು ಬಿಂಬಿಸುವಂತಾಹುಗಳಾಗಿವೆ. ದರ್ಗಾಗಳು ಹಿಂದು ಧರ್ಮದಲ್ಲಿ ಉತ್ಸವ ಅಥವಾ ಸಮಾರಂಭಗಳಲ್ಲಿ ಬಳಸುವಂತಹ ತಮಟೆ, ನಗಾರಿ, ಡೊಳ್ಳು ಬಾಜಭಜಂತ್ರಿಗಳು ವಿವಿಧ ವೇಷಧಾರಿಗಳು, ಅನೇಕ ಪ್ರದರ್ಶನಗಳನ್ನು ತೋರಿಸುವ ಹಾಗೆ ಮುಸ್ಲಿಂ ಸಮುದಾಯದ ದರ್ಗಾಗಳ ಉತ್ಸವದಲ್ಲಿ ಈ ಎಲ್ಲಾ ಆಚರಣೆಗಳು ಕಂಡುಬರುವುದರಿಂದ ಧಾರ್ಮಿಕವಾಗಿ, ಭಾಷಿಕವಾಗಿ, ಭೌತಿಕವಾಗಿ ಈ ಎರಡು ಸಮುದಾಯಗಳವರಲ್ಲಿ ಸಾಂಸ್ಕೃತಿಕವಾಗಿ ಒಂದೇ ಎನ್ನುವ ಭಾವನೆ ಬೇರೂರಿದೆ.

ಭಾರತದ ದೇಶದ ದರ್ಗಾಗಳು, ಸಾಂಸ್ಕೃತಿಕ ಇತಿಹಾಸ ಹಾಗೂ ಸಂಸ್ಕೃತಿಯ ಒಂದು ಭಾಗವಾಗಿರುವಂತಹ ಭಾರತದಲ್ಲಿ ದಿನನಿತ್ಯ ನಡೆಯುತ್ತಿರುವಂತಹ ಕೋಮು ಗಲಭೆಗಳಿಗೆ ಸಹಬಾಳ್ವೆಯ ಏಕತೆಯನ್ನು ಸಾರುವಂತಹ ಮಹತ್ವವಾದ ಸಂಸ್ಕೃತಿಯನ್ನು ದರ್ಗಾಗಳಿಂದ ಪೂರೈಸಲ್ಪಡುತ್ತವೆ. ಬಹುತೇಕವಾಗಿ ದರ್ಗಾಗಳು ಗ್ರಾಮೀಣ ಪ್ರದೇಶದಲ್ಲಿರುವುದರಿಂದ ಗ್ರಾಮೀಣ ಪ್ರದೇಶದ ಬೇರೆ ಬೇರೆ ಸಮುದಾಯದವರು ಮುಸ್ಲಿಂ ಸಮುದಾಯದೊಡನೆ ಸಹಬಾಳ್ವೆಯನ್ನು ನಡೆಸುತ್ತಿರುವುದಕ್ಕೆ ಪ್ರಮುಖವಾದ ಕಾರಣವೆಂದರೆ ದರ್ಗಾಗಳು. ನಗರ ಪ್ರದೇಶ ಮತ್ತು ಪಟ್ಟಣಗಳಲ್ಲಿ ಒಂದಲ್ಲಾ ಒಂದು ಕಾರಣಗಳಿಗೆ ಕೋಮು. ಗಲಭೆಗಳು ನಡೆಯುತ್ತಲೇ ಇವೆ. ಆದರೆ ದರ್ಗಾಗಳ ಸಂಸ್ಕೃತಿಯನ್ನು ಒಪ್ಪಿಕೊಂಡಿರುವ ಪ್ರದೇಶಗಳಲ್ಲಿ ಇಂತಹ ಕೋಮು ಗಲಭೆಗೆ ಅವಕಾಶಗಳಿಲ್ಲ. ಏಕತೆಯ ಭಾವನೆಯನ್ನು ವ್ಯಕ್ತಪಡಿಸುವ ಸೇತುವೆಗಳಾಗಿ ಮಾರ್ಪಟ್ಟಿರುವ ದರ್ಗಾಗಳು ಸಹಬಾಳ್ವೆಗೆ ಕನ್ನಡಿಯನ್ನಿಟ್ಟ ಹಾಗೆ ದರ್ಗಾಗಳು ಬಿಂಬಿಸಲ್ಪಟ್ಟಿವೆ. ಹೀಗೆ ಸಾಂಸ್ಕೃತಿಕ,

ಐತಿಹಾಸಿಕ, ಐತಿಹ್ಯಗಳು ಮತ್ತು ಜನಪದ ಕಥೆಗಳಿಂದ ಪವಿತ್ರ ಸ್ಥಳಾವಾಗಿರುವಂತಹ ದರ್ಗಾಗಳು ಐಕ್ಯತೆಯನ್ನು ಸಾರುವಂತಹ ತಾಣಗಳಾಗಿವೆ.

ಸಮಾಜದಲ್ಲಿ ದರ್ಗಾ ಮತ್ತು ವಲೀಗಳ ಬಗ್ಗೆ ಟೀಕೆ ಟಿಪ್ಪಣಿಗಳಿದ್ದರೂ ಏಕತೆಯನ್ನು ಸಾರುವಂತಹ ಸಹಬಾಳ್ವೆಯನ್ನು ಉತ್ತೇಜಿಸುವ ತಾಣಗಳಾಗಿರುವುದರಿಂದ ದರ್ಗಾಗಳು ಸಮಾಜದ ಸುಖಜೀವನಕ್ಕೆ ದಾರಿ ದೀಪಗಳ ಹಾಗೆ ಉರಿಯುತ್ತಿರುವುದು ಕತ್ತಲೆಯಲ್ಲಿರುವಂತಹ ಕೋಮುವಾದಿಗಳಿಗೆ ಬೆಳಕು ಹರಿಸುವ ತಾಣಗಳಾಗಿ ದರ್ಗಾಗಳು ಪ್ರಮುಖ ಸ್ಥಾನವನ್ನು ಪಡೆದುಕೊಂಡಿವೆ. ಇಂತಹ ಅನೇಕ ವಿಷಯಗಳಿಂದ ಕನಕಪುರ ತಾಲ್ಲೂಕಿನ ದರ್ಗಾಗಳು ಭಾವೈಕ್ಯತೆಗೆ ಭಾಜನವಾಗಿವೆ.

**ಉಪಸಂಹಾರ**

ಕನಕಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿನ ದರ್ಗಾಗಳ ಹಾಗೂ ಆಚರಣೆಯನ್ನು ಕುರಿತು ಇಲ್ಲಿಯವರೆಗೆ ವಿವರಿಸಿರುವ ಸಂಗತಿಗಳು ಎರಡು ನೆಲೆಯಲ್ಲಿ ಬಿಂಬಿಸಲಾಗಿದೆ.ಒಂದು ಮುಸ್ಲಿಂ ಸಮುದಾಯದ ದರ್ಗಾಗಳ ವಿಭಿನ್ನತೆಗಳಾದರೆ ಇನ್ನೊಂದು ಜಾನಪದೀಯ ನೆಲೆಯಲ್ಲಿನ ನಂಬಿಕೆಗಳಾಗಿವೆ. ಇದರ ಜೊತೆಗೆ ಕನಕಪುರ ತಾಲ್ಲೂಕಿನ ಭೌಗೋಳಿಕ ಹಿನ್ನೆಲೆ, ಪೌರಾಣಿಕ ಹಿನ್ನೆಲೆ, ತಾಲ್ಲೂಕಿನ ಮೇರೆಗಳ ವಿಸ್ತೀರ್ಣ, ಮಣ್ಣಿನ ಲಕ್ಷಣ, ವ್ಯವಸಾಯ ಹೀಗೆ ಇನ್ನಿತರೆ ವಿಷಯಗಳಿಂದ ಪ್ರಮುಖ ಪ್ರೇಕ್ಷಣೀಯ ಸ್ಥಳಗಳವರೆಗೆ ವಿವರಿಸಲಾಗಿದೆ.ಕನಕಪುರ ತಾಲ್ಲೂಕು, ಪ್ರಮುಖ ವಿಷಯಗಳಿಗೆ ಸಂಬಂಧಿಸಿದಂತೆ, ಪ್ರಾಮುಖ್ಯತೆ ಪಡೆದಿರುವುದರಿಂದ ಕನಕಪುರ ತಾಲ್ಲೂಕಿನ ಭೌಗೋಳಿಕ ವಿಷಯಗಳನ್ನು ಸಂಗ್ರಹಿಸಲಾಗಿದೆ.

ಕನಕಪುರ ತಾಲ್ಲೂಕಿನ ಮುಸ್ಲಿಂ ಸಮುದಾಯದ ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಕ್ಷೇತ್ರ ಕಾರ್ಯವನ್ನಾಧರಿಸಿ ವಿವರವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ. ಹಾಗೂ ಮುಸ್ಲಿಂ ಸಮುದಾಯದ ದರ್ಗಾಗಳ ವೈಶಿಷ್ಟ್ಯತೆಯನ್ನು ಗುರುತಿಸುವುದು. ಈ ಅಧ್ಯಯನದ ಮುಖ್ಯ ಉದ್ದೇಶವಾಗಿತ್ತು.ಕನಕಪುರ ತಾಲ್ಲೂಕಿನ ಪರಿಸರದಲ್ಲಿ ವಾಸವಾಗಿರುವ ಮುಸ್ಲಿಂ ಸಮುದಾಯದ ದರ್ಗಾಗಳ ವೈಶಿಷ್ಟ್ಯತೆಗಳನ್ನು ನಿರ್ದಿಷ್ಟವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.ತಾಲ್ಲೂಕಿನ ಮುಸ್ಲಿಂ ಸಮುದಾಯ ಬೆಳೆದಂತೆಲ್ಲಾ ಸಂಶೋಧನೆಯ ನೆಲೆಗಳು ವ್ಯಾಪಕವಾಗುತ್ತವೆ. ಎಂಬುದದನ್ನು ತಿಳಿದಿದ್ದೇನೆ.

ಆಧುನಿಕ ಜೀವನ ಶೈಲಿಯ ಪರಂಪರೆಯಿಂದ ವರ್ಗ ಮತ್ತು ವರ್ಣ ಎಂಬ ಶ್ರೇಣೀಕರಣದ ವ್ಯವಸ್ಥೆಯಲ್ಲಿ ಉಳ್ಳವರು ಮತ್ತು ಇಲ್ಲದವರ ನಡುವಿನ ಹೋರಾಟಗಳು ನಿರಂತರವಾಗಿ ನಡೆಯುತ್ತಲೇ ಇವೆ. ಮುಸ್ಲಿಂ ಸಮುದಾಯದ 'ಜಮಾತ್' ನವರಿಗೂ ಹಳ್ಳಿಗಳಲ್ಲಿ

ವಾಸವಾಗಿರುವ ದರ್ಗಾ ಸಂಸ್ಕೃತಿಯನ್ನು ಒಪ್ಪಿಕೊಂಡಿರುವ ಮುಸ್ಲಿಂಮರ ನಡುವೆ ನಿರಂತರವಾಗಿ ಹೊಂದಾಣಿಕೆಯ ಸಂಘರ್ಷ ನಡೆಯುತ್ತಲೆ ಇದೆ. ಇಂತಹ ಹೊಂದಾಣಿಕೆಯಿಂದ ಅನೇಕ ಆಚರಣೆಗಳು ತಮ್ಮ ಮೂಲಸತ್ವವನ್ನು ಕಳೆದುಕೊಳ್ಳುವುದನ್ನು ಈ ಅಧ್ಯಯನದ ಮುಖಾಂತರ ಗುರುತಿಸಬಹುದಾಗಿದೆ.

ಸಹಬಾಳ್ವೆ ದಾನ, ಧರ್ಮ, ಕರುಣೆ, ನೀತಿ--ನಿಯಮ ಸ್ವಚ್ಚತೆ, ಹಾಗೂ ಅನುಕಂಪದಿಂದ ವರ್ಣಿಸುವ ಅನೇಕ ವಿಷಯಗಳು ಮುಸ್ಲಿಂ ದರ್ಗಾಗಳ ಮೂಲಕ ಕಂಡು ಬರುವುದು.ಅಧ್ಯಯನದಲ್ಲಿ ನಿರೂಪಿಸಲಾಗಿದೆ.ಸಣ್ಣ-ಪುಟ್ಟ ವೈಮನಸ್ಸುಗಳನ್ನು ಮರೆತು ಸ್ನೇಹದಿಂದ ಪ್ರೀತಿ, ಸಹಕಾರ, ವಿಶ್ವಾಸಗಳಿಗೆ ಪೂರಕವಾದಂತಹ ಆಚರಣೆಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ದರ್ಗಾಗಳು ಮತ್ತು ದರ್ಗಾ ಸಂಸ್ಕೃತಿಯ ಗುರಿ ಮತ್ತು ಉದ್ದೇಶಗಳು ಖಚಿತವಾಗಿವೆ. ಒಂದು ಸಮುದಾಯದ ಜೀವನ ವಿಧಾನಗಳೇ ಆ ಸಮಾಜದ ರೀತಿ-ನೀತಿಗಳನ್ನು ನಿರೂಪಿಸುವಂತಹ ಬಿಂಬಗಳಾಗಿವೆ. ಕನಕಪುರ ತಾಲ್ಲೂಕು ನಾನು ಜನಿಸಿದ ತಾಲ್ಲೂಕಾಗಿದ್ದು, ಅಧ್ಯಯನದ ಮೊದಲು ಈ ಎಲ್ಲಾ ದರ್ಗಾಗಳ ಮಾಹಿತಿ ತಿಳಿದಿದ್ದೆ.ಅಧ್ಯಯನಕ್ಕೆ ತೊಡಗಿಸಿಕೊಂಡ ಮೇಲೆ ಎಲ್ಲಾ ದರ್ಗಾಗಳ ಕ್ಷೇತ್ರ ಕಾರ್ಯ ಆಧಾರದ ಮೇಲೆ ಈ ಪ್ರಬಂಧದ ಅಧ್ಯಯನ ಅವಲಂಬಿತವಾಗಿರುವ ಸಂದರ್ಭದಲ್ಲಿ ಅಪಾರ ಮಾಹಿತಿ ಹಾಗೂ ಸಹಕಾರವನ್ನು ವಕ್ತೃಗಳಿಂದ ಪಡೆದಿರುತ್ತೇನೆ. ಹಾಗಾಗಿ ವಕ್ತೃಗಳ ಪರಿಚಯ ಪಟ್ಟಿಯನ್ನು ಈ ವಿಷಯಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು, ಪದಗಳ ಶಬ್ದಾರ್ಥ ಕೋಶವನ್ನು ಹಾಗೂ ಅಧ್ಯಯನಕ್ಕೆ ಒಳಗೊಂಡಿರುವ ಪ್ರಕಟಿತ ಜನಪದ ಸಾಹಿತ್ಯ ಮತ್ತು ಪರಾಮರ್ಶನ ಕೃತಿಗಳನ್ನು ಅನುಬಂಧದಲ್ಲಿ ನೀಡಿದ್ದೇನೆ.

# ಅನುಬಂಧಗಳು

# ಅನುಬಂಧ – 1

## **ಛಾಯಾಚಿತ್ರಗಳು**



ಉರುಸ್ ಸಂಧರ್ಭದಲ್ಲಿ
ದರ್ಗಾಕ್ಕೆ ಮಾಡಿರುವ
ದೀಪಾಲಂಕಾಂ



ಉರುಸ್ ಸಂಧರ್ಭದಲ್ಲಿ
ದರ್ಗಾಕ್ಕೆ ಮಾಡಿರುವ
ದೀಪಾಲಂಕಾರ



ಉರುಸ್ ಸಂಧರ್ಭದಲ್ಲಿ
ವಲೀಯವರ ಸಮಾಧಿಗೆ
ಹೂವಿನ ಅಲಂಕಾರ



ಉರುಸ್ ಉತ್ಸವಕ್ಕೆ
ಬಳಸುವ ವಾದ್ಯಗಳು



ಉರುಸ್ ಸಂಧರ್ಭದಲ್ಲಿ
ಖವಾಲಿ ಗಾಯನ



ಉರುಸ್ ಸಂಧರ್ಭದಲ್ಲಿ
ಖವಾಲಿ ಕೇಳುತ್ತಿರುವ
ಭಕ್ತಾದಿಗಳು



ಉರುಸ್ ಸಂಧರ್ಭದಲ್ಲಿ
ಊಟದ ವ್ಯವಸ್ಥೆ
ಮಾಡಿರುವುದು



ಕ್ಷೇತ್ರ ಕಾರ್ಯದಲ್ಲಿ
ಪಕೀರರಿಂದ ಮಾಹಿತಿ
ಪಡೆಯುತ್ತಿರುವುದು



ಕನಕಪುರ ತಾಲ್ಲೂಕಿನ
ಫಕೀರರು



ಕಲ್ಲುಕೆರೆ ದೊಡ್ಡಿಯ ದರ್ಗಾದಲ್ಲಿ ಅಣ್ಣ-ತಮ್ಮಂದಿರ ಮೂರು ಸಮಾಧಿಗಳು



ಸಮಾಧಿಗೆ ಭೇಟಿ ಕೊಟ್ಟಿರುವ ಹಿಂದೂ ಧರ್ಮಿಯರು



ದರ್ಗಾದ ಮುಶದ್ ಜಾತಕ ನೋಡುತ್ತಿರುವುದು

ದರ್ಗಾದಲ್ಲಿ ಸಮಾಧಿಯ ಮೇಲ್ಭಾಗದಲ್ಲಿ ಮಾಡಿರುವ ಕುಸುರಿ ಅಲಂಕಾರ






ದರ್ಗದ ಒಳಭಾಗದ ಗೋಡೆಗಳ ಮೇಲಿನ ಕುರಾನ್‌ನ ಕೆಲವು ಶ್ಲೋಕಗಳು



ದರ್ಗಾದಲ್ಲಿ ಇಟ್ಟಿರುವ ಬೆಳ್ಳಿ ಹಸ್ತಗಳು



ಹೂಕುಂದದ

ದರ್ಗಾ



ವಲೀಯವರ ಸಮಾಧಿಯ
ಉತ್ತರಕ್ಕೆ ನಿರ್ಮಿಸಿರುವ
ಗುಂಬಸ್



ವಲೀಯ ಸಮಾಧಿಯ
ಉತ್ತರದಲ್ಲಿ ಯಾವಾಗಲೂ
ಉರಿಯುತ್ತಿರುವ ದೀಪ



ವಲೀಯವರು ಜೀವಂತ
ಐಕ್ಯವಾಗುವ ಸ್ಥಳ



ವಲೀಯವರು 40 ದಿನಗಳ
ಕಾಲ ಛಿಲ್ಲಾ
ಕೂರುವ ಸ್ಥಳ



ಪ್ರತಿಯೊಂದು ದರ್ಗದಲ್ಲಿಯು
ಕಂಡುಬರುವಂತಹ
ಮಹಬೂಬ್ ಸುಬಾನಿ ಮತ್ತು
ಗೌಸೆಪೀರ್ ರವರ
ಝುಂಡಾಗಳು



ದರ್ಗಾದಲ್ಲಿ ಭೂತ
ಪ್ರೇತಗಳನ್ನು
ಬಂಧಿಸಲ್ಪಟ್ಟಿರುವುದು



ದರ್ಗಾದಲ್ಲಿ ದುಷ್ಟಶಕ್ತಿ
ನಿವಾರಣೆಗೆ
ಬಂದಿರುವಂತವರು



ಟಿಪ್ಪುಸುಲ್ತಾನ್ ಕಾಲದಲ್ಲಿ
ಸೈನಿಕರು ತಂಗುತ್ತಿದ್ದ
ತುಂಗಣಿಯಲ್ಲಿರುವಂತಹ
ಐತಿಹಾಸಿಕ ನೀರಿನ ಕೊಳ



ಟಿಪ್ಪುಸುಲ್ತಾನ್ ಕಾಲದಲ್ಲಿ ಸೈನಿಕರು ತುಗಣಿಯಲ್ಲಿ ತಂಗಿದ್ದ ಸಂಧರ್ಭದಲ್ಲಿ ಕುದುರೆಗಳನ್ನು
ಕಟ್ಟುತ್ತಿದ್ದ ಕಲ್ಲುಗಳು

# ಅನುಬಂಧ –2

## ಶಬ್ದಾರ್ಥ ಕೋಶ

1) ಅಲ್ಲಾ – ಇಸ್ಲಾಂ ಧರ್ಮದ–ಏಕಮೇವ–ಆದಿದೈವ, ಸರ್ವೋತಮನು.

2) ಇಮಾಮ್ – ಧಾರ್ಮಿಕ ಗುರು

3) ಇಸ್ಲಾಂ – ಶರಣಾಗುವುದು

4) ಉದ್ದಾನ್ – ಸಾಂಬ್ರಾಣಿ ದೋಲರ ಹಾಕುವ ಸಾಧನ

5) ಉರುಸ್ – ಸೂಫಿ ಸಂತನ ವಾರ್ಷಿಕ ತಿಥಿಯ ಸಮಾರಂಭ

6) ಕುರಾನ್ – ಮುಸ್ಲಿಂಮರ ಪವಿತ್ರ ಗ್ರಂಥ

7) ಖಿಚಡಿ – ತರಕಾರಿ ಮತ್ತು ಕಾಳುಗಳಿಂದ ಮಾಡಿದ ಅನ್ನ

8) ಖವಾಲಿ – ವಲೀ ಮತ್ತು ಅಲ್ಲಾನ ಹೆಸರಿನಲ್ಲಿ ಹಾಡುವ ಗಾಯನ

9) ಗುಂಬಜ್ – ಸಮಾಧಿಯ ಉತ್ತರ ಭಾಗದಲ್ಲಿರುವ ಸ್ತಂಭ

10) ಗೌಸ್‌ಯೇ ಪಾಕ್ ಝುಂಡಾ – ಎಲ್ಲಾ ದರ್ಗಾಗಳಲ್ಲಿಯು ಇರುವ ಧ್ವಜಸ್ತಂಭ

11) ಚಾದರ್ – ಹೂವಿನ ಹೊದಿಕೆ, ಬಟ್ಟೆಯ ಹೊದಿಕೆ

12) ಚೋಂಗೆ – ಚಿರೋಟಿ

13) ಜವಾಬ್ – ಉತ್ತರ

14) ಜುಲುಸ್ – ಮೆರವಣಿಗೆ

15) ಜಮಾಯತ್ – ಸಭೆ, ಮುಸ್ಲಿಂಮರ ಸಂಪ್ರದಾಯವನ್ನು ಕಟ್ಟು ನಿಟ್ಟಾಗಿ ಪಾಲಿಸುವವರು.

16) ತಾವಿಜ್ – ದರ್ಗಾದಲ್ಲಿ ಅಲ್ಲಾನ ನಾಮವನ್ನು ಬರೆದುಕೊಡುವ ತಾಯತ.

17) ನಹಾವನ್ – ಹೆಣ್ಣು–ಗಂಡಿನ ಮದುವೆ ಮೂರು ದಿನ ಮುಂಚೆ ದರ್ಗಾದ ಬಳಿ ಸ್ನಾನ ಮಾಡಿಸುವುದು.

18) ಬಯ್ಯತ್ – ಫಕೀರರಿಂದ ದೀಕ್ಷೆ ಪಡೆಯುವುದು.

19) ಫಕೀರ್ – ಮೊಹಮ್ಮದಿಯಲ್ಲಿ ಸಂಸಾರವನ್ನು ತೊರೆದವನು. ಸಾಧು,

ಜಂಗಮ, ಆಸೆಗಳ ಗೆದ್ದವನು. ಬಡವ

20) ಮಿನಾರ್ – ದರ್ಗಾಗಳ ಮೇಲೆ ವೃತ್ತಾಕಾರವಾಗಿರುವ ಗುಮ್ಮಟ

21) ಮೌಲ್ವಿ – ಮಸೀದಿಯಲ್ಲಿರುವ ಮುಸ್ಲಿಂಮರ ಧರ್ಮಗುರು.

22) ಮಕಾನ್ – ಸ್ಮಶಾನ

23) ಸಿರಾನೆ – ಗೋರಿಯ ತಲೆಯ ಭಾಗದ ಕಡೆ

24) ಸಯ್ಯದ್ – ನಾಯಕ, ಸೂಫಿ ಸಂತರಿಗೆ, ಪಕೀರರಿಗೆ ಗೌರವ ಸೂಚಕವಾಗಿ ಬಳಸುವ ಬಿರುದು.

25) ವಜ್ಹೂ – ನಮಾಜ್ ಮೊದಲು ಅಥವಾ ದರ್ಗಾ ಪ್ರವೇಶದ ಮೊದಲು ಬಾಯಿ, ಮುಖ.ಕೈ ಕಾಲು ತೊಳೆಯುವುದು.

26) ಜುಬ್ಹಾ – ಅಲ್ಹಾನ ನಾಮದಿಂದ ಸ್ವೀಕಾರಾರ್ಹ ಪ್ರಾಣಿಯನ್ನು ಮುರ್ಷದ್‌ರವರು ಕೊಯ್ಯುವುದು.

27) ತಬ್ಸೀ – ಜಪಮಾಲೆ

28) ಫಾತೇಹ (ಪೂಜೆ) – ಸಕ್ಕರೆ ಓದಿಸುವುದು. ಕುರಾನಿನ ಒಂದು ಮಂತ್ರದ ಓದು

29) ಪಂಜೇ – ಬೆಳ್ಳಿಯ ಹಸ್ತ

30) ಮುರ್ಷದ್ – ಫಕೀರ್, ಇಸ್ಲಾಂ ಧಾರ್ಮಿಕ ಗುರುಗಳಿಂದ ದೀಕ್ಷೆ ಪಡೆದವನು.

31) ಯಾಸಿನ್ – ಕುರಾನಿನ ಒಂದು ಶ್ಲೋಕ

32) ಸವಾಲ್ - ಪ್ರಶ್ನೆ

33) ದರ್ಗಾ – ವಲೀಗಳ ಗೋರಿ. ಸಮಾಧಿ

34) ವಲೀ – ದೇವರ ಗೆಳೆಯ, ಸಂತ, ಸಮಾಜ ಸೇವಕ.

## ಅನುಬಂಧ – 3

## ಕ್ಷೇತ್ರ ಕಾರ್ಯದಲ್ಲಿ ಮಾಹಿತಿ ಒದಗಿಸಿದ ಆಯ್ದ ಪ್ರಮುಖ ವ್ಯಕ್ತಿಗಳ ವಿವರ

| ಕ್ರ.ಸಂ | ಹೆಸರು | ಊರು | ವಯಸ್ಸು | ಸಮುದಾಯ |
|---|---|---|---|---|
| 1. | ಹಜರತ್ ಖಾಜ ಸೈಯದ್ ಬಹುದೀನ್ ಅಲೀಷಾ ಸತರ್‌ಜಾಕ್ ಬಂಡಾರಿಮಂಡಲ್ ಬನೂದಾರ್ | ಕನಕಪುರ | 45 | ಮುಸ್ಲಿಂ |
| 2. | ಅಮೀರ್ ಮುರ್ಷದ್ | ಕನಕಪುರ | 60 | ಮುಸ್ಲಿಂ |
| 3. | ಮುನೀರ್ ಪಾಷ | ಕನಕಪುರ | 60 | ಮುಸ್ಲಿಂ |
| 4. | ದೀದಾರ್ ಅಲಿಷಾ | ಕನಕಪುರ | 50 | ಮುಸ್ಲಿಂ |
| 5. | ಅಮೀಉಲ್ಲಾ | ಕನಕಪುರ | 40 | ಮುಸ್ಲಿಂ |
| 6. | ಕೋಲಾರಿ | ಕನಕಪುರ | 45 | ಮುಸ್ಲಿಂ |
| 7. | ನಸೀಮಾ | ಕನಕಪುರ | 55 | ಮುಸ್ಲಿಂ |
| 8. | ಜರೀನಾ | ಕನಕಪುರ | 45 | ಮುಸ್ಲಿಂ |
| 9. | ಮುಬೀನ್‌ತಾಜ್ | ಕನಕಪುರ | 40 | ಮುಸ್ಲಿಂ |
| 10. | ಶಬೀನಾ | ತುಂಗಣಿ | 35 | ಮುಸ್ಲಿಂ |
| 11. | ಶಿವಣ್ಣ | ತುಂಗಣಿ | 65 | ಹಿಂದೂ |
| 12. | ಸಿದ್ದೇಗೌಡ | ತುಂಗಣಿ | 60 | ಹಿಂದೂ |
| 13. | ಹಜರತ್ ಸಿರಾಜುದ್ದೀನ್ ಷಾ ಖಾದ್ರಿ | ತುಂಗಣಿ | 67 | ಮುಸ್ಲಿಂ |
| 14. | ವಸಂತ್ | ತುಂಗಣಿ | 45 | ಹಿಂದೂ |
| 15. | ಮುರ್ಷದ್ ಅಲಿಜಾನ್ | ಕಲ್ಲುಕೆರೆದೊಡ್ಡಿ | 70 | ಮುಸ್ಲಿಂ |
| 16. | ಅಮೀರ್‌ಸಾಬ್ | ಕಲ್ಲುಕೆರೆದೊಡ್ಡಿ | 55 | ಮುಸ್ಲಿಂ |
| 17. | ಅಕ್ಬರ್ ಅಲಿಖಾನ್ | ಬೆಂಗಳೂರು | 46 | ಮುಸ್ಲಿಂ |
| 18. | ಜಾಬೀರ್ | ಸಂತೆಕೋಡಿಹಳ್ಳಿ | 40 | ಮುಸ್ಲಿಂ |
| 19. | ಆಲಿ | ಸಂತೆಕೋಡಿಹಳ್ಳಿ | 45 | ಮುಸ್ಲಿಂ |
| 20. | ಮುಜೀಬ್ | ಸಂತೆಕೋಡಿಹಳ್ಳಿ | 65 | ಮುಸ್ಲಿಂ |
| 21. | ಶಬೀನಾ ತಾಜ್ | ಸಂತೆಕೋಡಿಹಳ್ಳಿ | 40 | ಮುಸ್ಲಿಂ |
| 22. | ಮುನ್ನವರ್ | ಬೆಂಗಳೂರು | 45 | ಮುಸ್ಲಿಂ |
| 23. | ಸುನಂದ | ಹುಣಸನಹಳ್ಳಿ | 25 | ಲಿಂಗಾಯಿತ |
| 24. | ಪಾರ್ವತಮ್ಮ | ಹುಣಸನಹಳ್ಳಿ | 60 | ಲಿಂಗಾಯಿತ |
| 25. | ರಾಜು | ಚಿಕ್ಕಬ್‌ಹಳ್ಳಿ | 45 | ಹಿಂದೂ |

| | | | | |
|---|---|---|---|---|
| 26. | ಸಾಬೀರಬೇಗಂ | ಹೂಕುಂದ | 60 | ಮುಸ್ಲಿಂ |
| 27. | ಸೈಯ್ಯದ್ ಯಾಕೂಬ್‌ಷಾ | ಹುಣಸನಹಳ್ಳಿ | 83 | ಮುಸ್ಲಿಂ |
| 28. | ಶಿವಣ್ಣ | ಮರಿಗೌಡನದೊಡ್ಡಿ | 35 | ಹಿಂದೂ |
| 29. | ಮುಬೀನ್‌ತಾಜ್ | ಸಾತನೂರು | 40 | ಮುಸ್ಲಿಂ |
| 30. | ಮಹಮ್ಮದ್ ನೂರುಲ್ಲಾ | ಸಾತನೂರು | 55 | ಮುಸ್ಲಿಂ |
| 31. | ಫಯಾಜ್ | ಸಾತನೂರು | 57 | ಮುಸ್ಲಿಂ |
| 32. | ನೂರುಲ್ಲಾ ಷರೀಫ್ | ಸಾತನೂರು | 70 | ಮುಸ್ಲಿಂ |
| 33. | ಅಬ್ದುಲ್ ಗನಿ | ಸಾತನೂರು | 60 | ಮುಸ್ಲಿಂ |
| 34. | ಮಹಮ್ಮದ್ ಗೌಸ್ ಶರೀಯತ್ | ಸಾಸಲಾಪುರ | 73 | ಮುಸ್ಲಿಂ |
| 35. | ಕರೀಗೌಡ | ಸಾಸಲಾಪುರ | 62 | ಹಿಂದೂ |
| 36. | ನಯಾಜ್‌ಪಾಷ | ಮೈಸೂರು | 50 | ಮುಸ್ಲಿಂ |
| 37. | ಮಹಮದ್ ಜಾಕೀರ್ ಹುಸೇನ್ | ತಿಮ್ಮಸಂದ್ರ | 40 | ಮುಸ್ಲಿಂ |
| 38. | ಇನ್ತಾಜ್‌ಪಾಷ | ತಿಮ್ಮಸಂದ್ರ | 56 | ಮುಸ್ಲಿಂ |
| 39. | ಅಪ್ರೋಜ್ | ತಿಮ್ಮಸಂದ್ರ | 45 | ಮುಸ್ಲಿಂ |
| 40. | ಅಫಜಲ್‌ಪಾಷ | ತಿಮ್ಮಸಂದ್ರ | 48 | ಮುಸ್ಲಿಂ |
| 41. | ಜಾವೀದ್ ಪಾಷ | ತಿಮ್ಮಸಂದ್ರ | 49 | ಮುಸ್ಲಿಂ |
| 42. | ಖುರ್ಷೀದ್ | ತಿಮ್ಮಸಂದ್ರ | 40 | ಮುಸ್ಲಿಂ |
| 43. | ನೂರ್‌ಜಾನ್ | ಕೆರಳಾಳುಸಂದ್ರ | | ಮುಸ್ಲಿಂ |
| 44. | ಜೈತುನ್.ಬಿ | ಕೆರಳಾಳುಸಂದ್ರ | 65 | ಮುಸ್ಲಿಂ |
| 45. | ಅಶ್ರಬ್.ಬಿ | ಕೆರಳಾಳುಸಂದ್ರ | 68 | ಮುಸ್ಲಿಂ |
| 46. | ಚಾನ್‌ಪಾಷ.ಕೆ.ಎ | ಕೆರಳಾಳುಸಂದ್ರ | 30 | ಮುಸ್ಲಿಂ |
| 47. | ಅಬ್ದುಲ್‌ಷರೀಫ್ | ಕೆರಳಾಳುಸಂದ್ರ | 68 | ಮುಸ್ಲಿಂ |
| 48. | ಸೈಯದ್‌ಖಾದರ್ | ಕೆರಳಾಳುಸಂದ್ರ | 48 | ಮುಸ್ಲಿಂ |
| 49. | ಮಹಮ್ಮದ್‌ರಫೀ | ಮರಳೇಬೇಕುಪ್ಪೆ | 33 | ಮುಸ್ಲಿಂ |
| 50. | ಮಹಮ್ಮದ್‌ಗೌಸ್ | ಟಿ.ಬೇಕುಪ್ಪೆ | 48 | ಮುಸ್ಲಿಂ |

# ಅನುಬಂಧ -4

## ಆಧಾರ ಗ್ರಂಥಗಳು :-


1) ದೇ.ಜೇ.ಗೌ ಜಾನಪದೀಯ ಅಧ್ಯಯನ – ಚೇತನ ಬುಕ್‌ಹೌಸ್ -1991

2) ಮಹಮ್ಮದ್ ಇಲ್ಯಾಸ್‌ನದ್ವಿ, ಇಸ್ಲಾಂ ನಂಬಿಕೆಗಳ ಮೂಲ -ಮೌಲಾನ ಅಬ್ದುಲ್ ಹಸನ್ ನದ್ವಿ ಅಕಾಡೆಮಿ ಭಟ್ಕಳ -2004

3) ಜವರೇಗೌಡದೇ, ಜಾನಪದ ಅಧ್ಯಯನ- ಚೇತನ್ ಬುಕ್‌ಹೌಸ್-ಮೈಸೂರು-1991

4) ಅಂಬಳಿಕೆ ಹಿರಿಯಣ್ಣ- ಜಾನಪದ ಪರಿಶೋಧನ, ಪ್ರಜ್ವಲ, ಪ್ರಕಾಶನ, ಮೈಸೂರು -1985

5) ಹೆಚ್. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ-ಡಿ.ವಿ.ಕೆ ಮೂರ್ತಿ ಪ್ರಕಾಶಕರು, ಮೈಸೂರು-2003

6) ಅಂಬಳಿಕೆ ಹಿರಿಯಣ್ಣ- ಜಾನಪದ – ಕೆಲವು ಅಧ್ಯಯನಗಳು, ಕ.ಜಾ.ಮ.ಯ.ಅ, ಬೆಂಗಳೂರು -1999

7) ಚಿದಾನಂದ ಮೂರ್ತಿ.ವಾ-ಸಂಶೋಧನೆ-ಕ.ಸಾ.ವ. ಬೆಂಗಳೂರು.

8) ನರಸಿಂಹಶಾಸ್ತ್ರಿ ದೇವುಡು 'ಕರ್ನಾಟಕ ಸಂಸ್ಕೃತಿ ಶಾರದಾ, ಪ್ರಕಟನಾಲಯ, ಬೆಂಗಳೂರು-1935.

9) ರಹಮತ್ ತರಿಕೆರೆ, ಪ್ರತಿ ಸಂಸ್ಕೃತಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು-1993.

10) ಕರ್ನಾಟಕದ ಸೂಫಿಗಳು-ರಹಮತ್ ತರೀಕೆರೆ

11) ಹರಿಣಾಟವಿ-ಡಾ॥ಮುನಿರಾಜಪ್ಪ

12) ಅರ್ಕಾವತಿ – ಸ್ಮರಣ ಸಂಚಿಕೆ-ಸಂ-ಎಂ.ಭೈರೇಗೌಡ, ತಾಸಿ.ತಿಮ್ಮಯ್ಯ

13) ಮೊಹರಂ ಪದಗಳು (ಸಂ) ಕೆ.ಎಸ್.ದೇವನೂರ್, ಪಿ.ಸಿ.ಶಾಖಾದಿಮಠ, ಗದಗ-1980

14) ಮೊಹರಂ ಪದಗಳು- ಡಾ॥ದಸ್ತಗೀರ್ ಅಲ್ಲೀಭಾಯಿ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು-1999.

15) ಮೊಹರಂ ರಿವಾಯತ ಪದಗಳು (ಸಂ) ವಿರುಪಾಕ್ಷಯ್ಯ, ನಂದಿಕೋಮಠ

16) ಶಿಶುನಾಳ ಶರೀಫ ಸಾಹೇಬರು, ಡಾII. ಶಿವಾನಂದ ಗುಬ್ಬಣ್ಣವರ, ಕ.ವಿ.ವಿ.ಧಾರವಾಡ – 1985

17) ಜನಪದ ನಂಬಿಕೆಗಳು– ರಾ.ಗೌ.ಡಾ–ಮಳಲಿ ವಸಂತಕುಮಾರ್

18) ಜಾನಪದ ಅಧ್ಯಯನ – ಡಾ॥ದೇ. ಜವರೇಗೌಡ

19) ಜಾನಪದ ಸ್ವರೂಪ – ಡಾ॥ಹಾ. ನಾಯಕ

20) ಕರ್ನಾಟಕದ ಮುಸ್ಲಿಂ ಜಾನಪದ – ಡಾ॥ಷಹಸೀನಾ ಬೇಗಂ–2000

21) ಜಾನಪದ ಹಬ್ಬಗಳು ಮತ್ತು ಉತ್ಸವಗಳು – ಹನುಮಂತರಾವ್. ಬಿ. ದೊಡ್ಡಮುನಿ– ಕ.ಸಾ.ಪ

22) ಕರ್ನಾಟಕದ ಜನಗಣತಿ–2011– ಡಾ॥ಟಿ.ಆರ್.ಚಂದ್ರಶೇಖರ್–2011. ಪ್ರಸಾರಾಂಗ– ಕನ್ನಡ ವಿಶ್ವವಿದ್ಯಾಲಯ, ಹಂಪಿ

23) ರಾಷ್ಟ್ರೀಯ ಹಬ್ಬಗಳು ಮತ್ತು ಸಮಾರಂಭಗಳು ಡಾ॥. ಹೆಚ್.ಎಂ.ನಾಗರಾಜು–2011

24) ಹಿಂದೂ ಮುಸ್ಲಿಂ ಹಬ್ಬಗಳು ಜಯಂತೋತ್ಸವಗಳು ಹಾಗೂ ದಿನಾಚರಣೆಗಳು (ಸಂ)–ಎಂ.ಕೆ. ಬಳ್ಳಾರಿ.ಎಂ.ಎ

25) ಹಬ್ಬಗಳು, ಜಯಂತೋತ್ಸವಗಳು ಮತ್ತು ಮಹತ್ವದ ದಿನಾಚರಣೆ ಶ್ರೀಮತಿ ಸರೋಜಾ. ಎಸ್

26) ಹಬ್ಬಗಳು ಮತ್ತು ದಿನಾಚರಣೆಗಳು–ಸಂಪಟೂರು ವಿಶ್ವನಾಥ್ –2007

27) ಕರ್ನಾಟಕದ ಹಬ್ಬಗಳು – ಡಾ॥ಡಿ.ಆರ್.ಪಾಂಡುರಂಗ–2009

28) ಮೈತ್ರಿ ಸಂದೇಶ–ಅನುವಾದಕ–ಮಹಮ್ಮದ್ ಯೂಸುಫ್, ಬಿಕ್ಷಾಂ

29) ಭಾರತೀಯ ಹಬ್ಬಗಳು ಮತ್ತು ಸಂಪ್ರದಾಯಗಳು –ಬೆ.ಗೋ.ರಮೇಶ್–1998.

30) ಸಾಮಾಜಿಕ–ಆರ್ಥಿಕ ಅವಲೋಕನ2011–12, ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ.

31) ಮಾಗಡಿ ಸೀಮೆ–ಇತಿಹಾಸ–ಸಂಸ್ಕೃತಿ– ಡಾ॥ಚ.ಮುನಿರಾಜಪ್ಪ

32) ಭಾರತೀಯ ಮುಸಲ್ಮಾನ ಶೋಧ ಹಾಗೂ ಭೋಧ–ಕನ್ನಡಕ್ಕೆ ಆದ್ಯ ರಾಮಾಚಾರ್ಯ

33) ಸನ್ಮಾರ್ಗದರ್ಶನ – ಹಜರತ್ ಮಿರ್ಜಾ ಬಶೀರ್ ಅಹಮದ್ ಸಾಹೇಬ್ – ಎಂ.ಎ.2000

34) ಗಂಗಸಿರಿ–ಸ್ಮರಣ ಸಂಚಿಕೆ – ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು–ರಾಮನಗರ–2012.

35) ರಾಮನಗರ ಜಿಲ್ಲೆಯ ಮಾದಿಗ ಸಮುದಾಯ ಒಂದು ಅಧ್ಯಯನ–ಶೋಧಕರು –ಶ್ರೀಮತಿ ಶಾಂತಮ್ಮ ಟಿ.ಆರ್

36) ಬೆಂಗಳೂರಿನ ಇತಿಹಾಸ ಚಿ.ನ.ಸುಂದರ್‌ರಾವ್

37) ನಮ್ಮ ಹಬ್ಬಗಳು – ಡಾ॥ಹೆಚ್.ವಿ.ನರಸಿಂಹಮೂರ್ತಿ–ಕುಂದಾಪುರ.

38) ನಮ್ಮ ಹಬ್ಬಗಳು ಶ್ರೀ ಶ್ರೀ ರಂಗಸ್ವಾಮಿ, ಅಷ್ಟಾಂಗ ವಿಜ್ಞಾನಮಂದಿರ–2006

39) ಕರ್ನಾಟಕದ ಜಾನಪದ – ಡಾ॥ಚ. ಕರೀಂಖಾನ್–ಎಸ್.ಕೆ (ಪ್ರ.ಸಂ)–1989

40) ಭಾರತದ ಹಬ್ಬ ಹರಿದಿನಗಳು– ಪ್ರೋ.ಡಿ.ಟಿ.ರಂಗಸ್ವಾಮಿ

41) ಕನ್ನಡ ರತ್ನಕೋಶ–ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು–2011

42) ಕರ್ನಾಟಕದ ಉರುಸ್‌ಗಳು – ಮುಲ್ಲಾ ಇಬ್ರಾಹಿಂ –2000

43) ಮುಸ್ಲಿಂ ಜನಾಂಗ ಒಂದು ಅಧ್ಯಯನ–ಇಸ್ಮತುನ್ನೀಸಾ–2006

44) ಮುಸ್ಲಿಂ ಲೇಖಕರು ಕಥಾಸಾಹಿತ್ಯ ಒಂದು ಅಧ್ಯಯನ–ಕಳಾರಲ್ಲವರ ಎಸ್.ಐ–2003

45) ಚಿ.ರಾಮನಗರ ಜಿಲ್ಲೆಯ ಸ್ಥಳ ನಾಮಗಳ ಅಧ್ಯಯನ–ವಿಶ್ವನಾಥ–2011

46) ಸಂಶೋಧನೆಯ ಸ್ವರೂಪ–ಬಿ.ವಿ.ಶಿರ್ಲೂರ.

